

# ವೈಷ್ಣವತನ್ತ್ರಮ್



( ವಿಷ್ಣ್ವಾದಿ 15 ದೇವತೆಗಳ ಪ್ರತಿಷ್ಠಾದಿ ವಿಧಿಗಳು )

ಸುದರ್ಶನ ಪ್ರಕಾಶನ, ಮೂಡುಬೆಳ್ಳೆ
ಉಡುಪಿ




# ಶ್ರೀ ಕೃಷ್ಣಮಠ
## ಪರ್ಯಾಯ ಶ್ರೀ ಕೃಷ್ಣಾಪುರ ಮಠ

ರಥಬೀದಿ, ಉಡುಪಿ – 576 101. ಫೋನ್ : 0820-2520598, ಮೊಬೈಲ್ : 9686603855

Email: paryaya@krishnapuramatha.org, Website : www.krishnapuramatha.org




ದಿನಾಂಕ [illegible]

### ಅನುಗ್ರಹ ಸಂದೇಶ

ಶ್ರೀಯುತರಾದ ಬೆಳ್ಳಿ ಸುದರ್ಶನ ಆಚಾರ್ಯರು ಲೇಖನ ಮಾಡಿದ "ವೈಷ್ಣವ ತಂತ್ರಂ" ಎನ್ನುವ ಗ್ರಂಥವು ವೈಷ್ಣವರಿಗೆ ನಿತ್ಯನೈಮಿತ್ತಿಕ ಅನುಷ್ಠಾನಕ್ಕೆ ಉಪಯುಕ್ತವಾಗಿದೆ.

ಇವರು ಪ್ರಮಾಣಾಂತರಗಳಿಂದ ನಿರೂಪಣೆಯನ್ನು ಪುಷ್ಟೀಕರಿಸಿ ಸಮರ್ಥಿಸಿರುವುದು ಶ್ಲಾಘನೀಯ. ವಿಷಯವಾರು ವಿಭಾಗ ಮಾಡಿರುವುದು ಓದುಗರಿಗೆ ಹಾಗು ಅನುಷ್ಠಾನ ಮಾಡುವವರಿಗೆ ನೇರವಾಗಿ ವಿಷಯವನ್ನು ತಿಳಿದುಕೊಳ್ಳಲು ಅನುಕೂಲಕರವಾಗಿದೆ. ವೈಷ್ಣವರು ಈ ಕೃತಿಯ ಉಪಯೋಗ ಪಡೆದು ವಿಶೇಷ ಫಲಭಾಗಿಗಳಾಗಬೇಕೆಂದು ಆಶಿಸುತ್ತೇವೆ. ಶ್ರೀಯುತರಿಂದ ಏತಾದೃಶ ಜ್ಞಾನಕಾರ್ಯ ಇತೋಪ್ಯತಿಶಯ ನಡೆಯುವಂತಾಗಲೆಂದು ಶ್ರೀಕೃಷ್ಣಮುಖ್ಯಪ್ರಾಣದೇವರಲ್ಲಿ ಪ್ರಾರ್ಥಿಸುತ್ತೇವೆ.

ಇತ್ಯನೇಕನಾರಾಯಣಸ್ಮರಣೆಗಳು

ಶ್ರೀವಿದ್ಯಾಸಾಗರತೀರ್ಥ ಶ್ರೀಪಾದರು.

ಪರ್ಯಾಯ ಶ್ರೀಕೃಷ್ಣಾಪುರ ಮಠ, ಉಡುಪಿ.

**ಶ್ರೀಕೃಷ್ಣಮಠ**
**ಪರ್ಯಾಯ ಶ್ರೀಕೃಷ್ಣಾಪುರಮಠ**
**ಉಡುಪಿ**



ಆಚಾರ್ಯ ಶ್ರೀಮಧ್ವಾಚಾರ್ಯ ಮೂಲಮಹಾ ಸಂಸ್ಥಾನಮ್

ಶ್ರೀರಾಮತೀರ್ಥ ಪೀಠಮ್

## ಶ್ರೀ ಕಾಣಿಯೂರು ಮಠ, ಉಡುಪಿ.



Phone: [illegible]

email: kaniyoormutt@gmail.com

---

ಶ್ರೀಃ

ನರಸಿಂಹೋಽಖಿಲಾಜ್ಞಾನಮತಧ್ವಾಂತದಿವಾಕರಃ ।

ಜಯತ್ಯಮಿತಸುಜ್ಞಾನಸುಖಶಕ್ತಿಪಯೋನಿಧಿಃ ॥

ಆತ್ಮೀಯರಾದ ಶ್ರೀಸುದರ್ಶನಾಚಾರ್ಯರಿಗೆ ಮಾಡುವ ನಾರಾಯಣ ಸ್ಮರಣೆಗಳು.

ನೀವು ಬರೆದಿರುವ 'ವೈಷ್ಣವತಂತ್ರಮ್' ಪುಸ್ತಕವನ್ನು ನೋಡಿ ಸಂತೋಷವಾಯಿತು. ದೇವತೆಗಳ ಪ್ರತಿಷ್ಠಾದಿಗಳ ವಿಧಿವಿಧಾನಗಳನ್ನು ಶಾಸ್ತ್ರೀಯವಾಗಿ ನಿರೂಪಿಸಿದ ನಿಮ್ಮ ಪ್ರಯತ್ನ ಸ್ತುತ್ಯರ್ಹವಾದದ್ದು.

ಈ ಪುಸ್ತಕದ ಉಪಯೋಗವನ್ನು ಸಮಾಜ ಪಡೆಯುವಂತಾಗಲಿ ನಿಮ್ಮಿಂದ ಇನ್ನಷ್ಟು ಗ್ರಂಥಗಳು ಪ್ರಕಟಗೊಳ್ಳುವಂತಾಗಲೆಂದು ಆಶಿಸುವೆವು.

ಇತ್ಯನೇಕ ನಾರಾಯಣ ಸ್ಮರಣೆಗಳೊಂದಿಗೆ.

ಶ್ರೀ ಶ್ರೀ ವಿದ್ಯಾವಲ್ಲಭತೀರ್ಥ ಶ್ರೀಪಾದರು,
ಶ್ರೀ ಕಾಣಿಯೂರು ಮಠ, ಉಡುಪಿ

Vishwaguru Shreemanmadhvacharya Moola Maha Samsthanam
SHREE NARAHARI TEERTHA PEETHAM
**PARYAYA SHREE ADAMARU MATHA**
**SHREE KRISHNA MATHA, UDUPI**

Car Street,
Udupi - 576101
Karnataka, India

Phone : 0820-2520598, 2520592
paryaya[illegible]@adamaru.com
www.adamarumatha.com

# ಅನುಗ್ರಹ ಸಂದೇಶ

ಸಾಧಕನೊಬ್ಬನಿಗೆ ಸೂಕ್ತ ಪರಿಸರ ಮತ್ತು ಸೂಕ್ತವಾದ ಅನುಸಂಧಾನಗಳು ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳುವಲ್ಲಿ ಸಹಾಯಕಗಳಾಗಿವೆ. ಆದ್ದರಿಂದ ತಿಳಿದು ಮಾಡುವ ಆಚರಣೆಗಳು ತಾರಕವಾಗಿವೆ. ಹೀಗಿರುವಾಗ ಹಿಂದೆ ಇದ್ದ ತಪ್ಪುಗಳನ್ನು ತಿದ್ದುವಂತಹ ಕೆಲಸ ಮಾಡಿದವರು ಆಚಾರ್ಯ ಮಧ್ವರು. ಅವರ ಪ್ರತಿಯೊಂದು ಸಂದೇಶದಲ್ಲಿ ಅದಕ್ಕೆ ಪೂರಕವಾದ ಸೂಕ್ತ–ಗ್ರಂಥ–ಶ್ಲೋಕ. ಇವುಗಳನ್ನೆಲ್ಲಾ ಒಟ್ಟೊಟ್ಟಿಗೆ ತಂದು ಆ ಮೂಲಕ ಒಬ್ಬ ಸಾಧಕನಿಗೆ ಅನುಸಂಧಾನ ಯಾವ ರೀತಿಯಾಗಿರಬೇಕು. ತಾರತಮ್ಯದ ರೀತಿಯಲ್ಲಿ ಯಾವ ರೀತಿಯಾಗಿ ಅನುಸಂಧಾನಗಳನ್ನು ಮಾಡಿಕೊಂಡು ಪೂಜಾ ವಿಧಿಗಳನ್ನು ಅನುಸರಿಸಬೇಕು. ಜಪ–ತಪದಲ್ಲಿ ತೊಡಗಬೇಕು ಎನ್ನುವ ಚಿತ್ರಣವನ್ನು ನಮಗೆ ನೀಡಿದ್ದಾರೆ. ಅವುಗಳನ್ನೆಲ್ಲಾ "ವೈಷ್ಣವತಂತ್ರ" ಎಂಬ ಈ ಹೊತ್ತಗೆಯಲ್ಲಿ ಸಂಗ್ರಹಿಸಲಾಗಿದೆ. ಇಂತಹ ಸಂಗ್ರಹಗಳು ಅಮೂಲ್ಯವಾದವುಗಳಲ್ಲದೇ. ಸುಲಭದಲ್ಲಿ ಆಚಾರ್ಯರ ಸಿದ್ಧಾಂತಗಳನ್ನು ಅಳವಡಿಸಿಕೊಳ್ಳಲಿಕ್ಕೆ ಸಹಾಯಕವಾಗುವಂಥದ್ದು. ಹಾಗಾಗಿ ಈ ಹೊತ್ತಗೆಯನ್ನು ನಾವೆಲ್ಲರೂ ಓದೋಣ. ಬೆಳ್ಳೆ ಸುದರ್ಶನ ಆಚಾರ್ಯರು ಈ ಪ್ರಯತ್ನದಲ್ಲಿ ತೊಡಗಿ. ತಾವು ಅಧ್ಯಯನವನ್ನು ನಡೆಸಿ, ಸಾಧಕರೂ ಕೂಡಾ ಆ ಮಾರ್ಗದಲ್ಲಿ ಹೋಗುವಂತೆ ಪ್ರೇರಣೆಯನ್ನು ನೀಡಿದ್ದಾರೆ. ಇವರಿಗೆ ಶ್ರೀಕೃಷ್ಣ ಮುಖ್ಯಪ್ರಾಣ ದೇವರು ಶ್ರೇಯಸ್ಸನ್ನುಂಟು ಮಾಡಲಿ.

ಇತ್ಯನೇಕ ನಾರಾಯಣ ಸ್ಮರಣೆಗಳು,

ಶ್ರೀ ಶ್ರೀ ಈಶಪ್ರಿಯತೀರ್ಥ ಶ್ರೀಪಾದಂಗಳವರು
ಪರ್ಯಾಯ ಶ್ರೀ ಅದಮಾರು ಮಠ
ಶ್ರೀಕೃಷ್ಣ ಮಠ, ಉಡುಪಿ



ಶ್ರೀಮನ್ ಮಾಧವತೀರ್ಥರ ಶ್ರೀಮಠ
Jagadguru Srimanmadhwacharya Moola Mahasamsthana
Srimanmadhavateertha Srimatha

Secretary 96067 66824
Joint Secretary 91418 26180
PRO's 98452 45785
99606 11604

# ಅನುಗ್ರಹ ಸಂದೇಶ

ಶ್ರೀಬೆಳ್ಳೆ ಸುದರ್ಶನಾಚಾರ್ಯರು ಸಂಗ್ರಹಿಸಿರುವ "ವೈಷ್ಣವ ತಂತ್ರಮ್" ಗ್ರಂಥವನ್ನು ಪರಾಮರ್ಶಿಸಿದ್ದೇವೆ. ನಿತ್ಯ ಪೂಜಾಹ್ನಿಕಾದಿಗಳಿಗೆ, ದೇವಾಲಯಾದಿಗಳ ನಿರ್ಮಾಣ ಹಾಗೂ ನಿತ್ಯ ಪೂಜಾ ವಿಧಿಗಳನ್ನು ತಂತ್ರ - ಆಗಮಗಳಲ್ಲಿ ಹೇಳಲ್ಪಟ್ಟಿದೆ. ಶ್ರೀಹರಿಯಿಂದಲೇ ನೇರವಾಗಿ ಚತುರ್ಮುಖನಿಗೆ ಉಪದೇಶಿಸಲ್ಪಟ್ಟ ತಂತ್ರಸಾರಯೆಂಬ ಒಂದು ತಂತ್ರ ಗ್ರಂಥವು ನಮಗಿಂದು ದೊರೆಯದಿದ್ದರೂ ಸರ್ವಜ್ಞರಾದ ಶ್ರೀಮನ್ಮಧ್ವಾಚಾರ್ಯರು ತಂತ್ರಸಾರ ಗ್ರಂಥದ ಸಾರರೂಪವಾಗಿ ಶ್ರೀತಂತ್ರಸಾರ ಸಂಗ್ರಹಯೆಂಬ ವಿಶಿಷ್ಟವಾದ ಒಂದು ಕೃತಿಯನ್ನು ರಚಿಸಿದ್ದಾರೆ.

ಶ್ರೀಸುದರ್ಶನಾಚಾರ್ಯರು ಈ ತಂತ್ರಸಾರ ಸಂಗ್ರಹದ ಬೆಳಕಿನಲ್ಲಿ ಶ್ರೀಮದಾಚಾರ್ಯರ ವಾಕ್ಯಗಳಿಗೆ, ಸಿದ್ಧಾಂತಕ್ಕೆ ವಿರೋಧ ಬಾರದಂತೆ ವಿಷ್ಣುವೇ ಮೊದಲಾದ 15 ದೇವತಗಳ ಪ್ರತಿಷ್ಠಾ ವಿಧಿ, ಆಲಯ ಜೀರ್ಣೋದ್ಧಾರ, ಪ್ರಾಯಶ್ಚಿತ್ತಾದಿಗಳ ಕ್ರಮವನ್ನು ಈ ಕೃತಿಯಲ್ಲಿ ತಿಳಿಸಿ ವೈಷ್ಣವರಿಗೆ ಅನುಕೂಲ ಮಾಡಿಕೊಟ್ಟಿದ್ದಾರೆ.

24 ಹರಿಯದ ಈ ಯುವ ಪಂಡಿತರ ಕ್ರಮವನ್ನು ಕಂಡು ನಮಗೆ ಬಹಳ ಸಂತೋಷವಾಗಿದೆ ಹಾಗೂ ಇವರಿಗೆ ಇನ್ನೂ ಜ್ಞಾನ ಭಕ್ತ್ಯಾದಿಗಳನ್ನು ಅನುಗ್ರಹಿಸಿ ಇವರಿಂದ ಇನ್ನೂ ಹೆಚ್ಚು ಕೃತಿಗಳು ಹೊರಬರಲಿಯೆಂದು ಅಸ್ಮದುಪಾಸ್ಯಮೂರ್ತಿ ಶ್ರೀಮದಾಚಾರ್ಯರ ಕರಾರ್ಚಿತ ಶೀಮೂಲವೀರರಾಮಚಂದ್ರ ದೇವರಲ್ಲಿ ಪ್ರಾರ್ಥಿಸುತ್ತೇವೆ.

ಇಂತಿ ನಾರಾಯಣ ಸ್ಮರಣೆಗಳು

श्रीविद्यासागरमाधवतीर्थः

ಶ್ರೀಶ್ರೀವಿದ್ಯಾಸಾಗರಮಾಧವತೀರ್ಥರು

Madhavapura, Tambihalli, Huttur Post, Kolar Dist. Kolar - 543301
Email : srimadhavatheerthamutt@gmail.com

ಶ್ರೀಮನ್ ಮಾಧವತೀರ್ಥರ ಶ್ರೀಮಠ
Jagadguru Srimanmadhwacharya Moola Mahasamsthana
Srimanmadhavateertha Srimatha

# ಅನುಗ್ರಹ ಸಂದೇಶ

ನಮಗೆ ಅತ್ಮೀಯರಾದ ಶ್ರೀಬೆಳ್ಳೆ ಸುದರ್ಶನಾಚಾರ್ಯರು ಸಂಗ್ರಹಿಸಿರುವ "ವೈಷ್ಣವ ತಂತ್ರಮ್" ಗ್ರಂಥವನ್ನು ಪರಿಶೀಲಿಸಿದ್ದೇವೆ. ಈ ಉತ್ತಮ ಗ್ರಂಥವು ಶ್ರೀಮದಾಚಾರ್ಯರ ತಂತ್ರಸಾರ ಸಂಗ್ರಹವನ್ನಲ್ಲದೇ ಅನೇಕ ತಂತ್ರಗ್ರಂಥಗಳ ಆಧಾರದಿಂದ ಕೂಡಿದ ಸಾಧಕರಿಗೆ ಅನುಕೂಲಕರವಾದ ಉತ್ತಮ ಗ್ರಂಥವಾಗಿದೆ.

ಇದರಲ್ಲಿ ಮಂತ್ರಗಳು, ದೇವತಾವಾಹನೆ - ಆರಾಧನೆ, ಆತ್ಮಶುದ್ಧಿ ಪೂಜಾವಿಧಾನ, ದೇವತಾ ಪ್ರತಿಷ್ಠಾಪನೆ, ಪ್ರಾಯಶ್ಚಿತ್ತ - ಸಂಪ್ರೋಕ್ಷಣೆ ಮತ್ತು ಜೀರ್ಣೋದ್ಧಾರ ಇತ್ಯಾದಿ ವಿಷಯಗಳನ್ನು ಬಹಳ ಸ್ಪಷ್ಟಪಡಿಸಲ್ಪಟ್ಟಿದೆ.

ಶ್ರೀಸುದರ್ಶನಾಚಾರ್ಯರು ಒಳ್ಳೆಯ ಪ್ರತಿಭಾವಂತರು, ಈ ಸಣ್ಣ ವಯಸಿನಲ್ಲಿ ಇವರ ಸಂಶೋಧನೆ, ಗ್ರಂಥ ಸಂಗ್ರಹ, ಬರಹ ಶೈಲಿ, ಯಥಾರ್ಥತೆ ಕಂಡು ನಮಗೆ ಬಹಳ ಸಂತೋಷವಾಯಿತು. ಅವರಿಗೆ ಇನ್ನು ಹೆಚ್ಚಿನ ಜ್ಞಾನ ಭಕ್ತಿಯನ್ನು ನಮ್ಮ ಉಪಾಸ್ಯಮೂರ್ತಿಯಾದ ನಿತ್ಯ ಸನ್ನಿಧಾನದಿಂದಿರುವ ಶ್ರೀಮೂಲವೀರರಾಮದೇವರಲ್ಲಿ ಪ್ರಾರ್ಥಿಸಿ **ನಾರಾಯಣ ಸ್ಮರಣೆ** ಮಾಡುತ್ತೇವೆ.

**ಶ್ರೀಮದ್ವೈಷ್ಣವ ತಂತ್ರ ಸಂಗ್ರಹ** ಕೃತೌ ವಿಷ್ವಾದಿ ಮಂತ್ರೋದ್ಧೃತಿಃ
**ದೇವಾನಾಂ ವಿಧಿ ಪೂರ್ವಕಂ** ಶ್ರುತಿವಚೋ ಮಂತ್ರೈಶ್ಚ ಸಂಸ್ಥಾಪನಮ್ ।
**ಪ್ರಾಯಶ್ಚಿತ್ತಮಥೋ ಸುಜೀರ್ಣ** ನವಕೃತ್ ಸಂಸಿದ್ಧಿಮತ್ತಂಡಿತಮ್
**ಕಲ್ಯಾಣೈಶ್ಚ** ಸುದರ್ಶನಾರ್ಯಮನಿಶಂ ಸಂರಕ್ಷತಾಂ ಶ್ರೀಹರಿಃ ॥

**ಇಂತಿ ನಾರಾಯಣ ಸ್ಮರಣೆಗಳು**

श्री विद्यावल्लभ माधवतीर्थः

**ಶ್ರೀಶ್ರೀವಿದ್ಯಾವಲ್ಲಭಮಾಧವತೀರ್ಥರು**

Madhavapura, Tambihalli, Huttur Post, Kolar Dist. Kolar - [illegible]
Email: [illegible]

## ಅವನಿಗೊಂದು ಮುನ್ನುಡಿ ಬೇಕೇ ?

ಈ ಅವನಿಯೊಳಗೆ ಅಡಿಯಿಟ್ಟ ಮೇಲೆ ನುಡಿಕಲಿತ ಬಳಿಕ ಗುಡಿಸಲು ಇರಲಿ ಇಲ್ಲದಿರಲಿ. ನಾವೊಂದು ಸರಿಯಾದ ಗುಡಿಯಾಗಲೇ ಬೇಕು. ತಂದವಗೆ; ನಮ್ಮ ಹಿಂದಿನ ತಂದೆಯಂದಿರನ್ನು ತಂದಿತ್ತವಗೆ.

ಹಾಗಾಗಲೊಂದು ಆದರ್ಶಕ್ಕೆ ಹೊರಗೆ ಸರಿಕಟ್ಟಾದ ಗುಡಿ ಮೊದಲು ಇರಲೇಬೇಕು. ಗರ್ಭಗುಡಿಯೊಳಗೆ ದೇವರ ಪರಿಪೂರ್ಣ ಪ್ರತಿಷ್ಠೆ ಆಗಿರಬೇಕು. ಆತನ ಪಾದದಡಿಯ ಹುಡಿ ಹಸಾದ ನಮಗೆ ಕಡೆಗಾದರೂ ಹಿಡಿಯುವಂತಿರಬೇಕು. ಇದಕ್ಕಾಗಿಯೇ ನಮ್ಮೆಲ್ಲರ ಯಾತ್ರೆ-ಜಾತ್ರೆ; ಪ್ರದಕ್ಷಿಣೆ-ಸುತ್ತುಬಲಿ; ಸಂತರ್ಪಣೆ-ಸಮಾರಾಧನೆ. ಇವನ್ನೆಲ್ಲ ನಡೆಸಲು ಹಕ್ಕು, ಯೋಗ್ಯತೆ, ಅಧಿಕಾರ, ಅಂತಸ್ತು ಎಲ್ಲಾ ಪಡೆದು ಬಂದಮೇಲೆ ಚೆನ್ನಾಗಿ ಅರಿತು ಇವನ್ನೆಲ್ಲ ನಡೆಸಿಕೊಡಬಾರದೇಕೆ ?

ಉದಾಸೀನವೇ ? ಮದ್ದಿಲ್ಲ.

ಹೊತ್ತಿಲ್ಲವೇ ? ಗೊತ್ತಿಲ್ಲ.

ಕರ್ಮಪರಂಪರೆಯ ವಿಶ್ವಾಸವೇ ? ಕುರುಡುತನ.

ಅರ್ಥವಾಗದೇ ? ತಪ್ಪಿಸುವ ಜಾಣ್ಮೆ.

ಮತ್ತೇನು ಕೊರತೆಯೇ ? ಇಲ್ಲಿದೆ ಭರ್ತಿಮಾಡಿಕೊಳ್ಳಲು. ಒಪ್ಪಿಗೆ ಬೇಕಿದೆ.

ಹಬ್ಬುತಿನ್ನುವಲ್ಲಿನ ಆತುರ ಅಂಕುರಾರೋಪಣೆಯಲ್ಲಿ ಏಕಿಲ್ಲ ?

ಉತ್ಸವದಲ್ಲಿನ ಉತ್ಸಾಹ ರಥಸಂಸ್ಕಾರದಲ್ಲಿ ಯಾಕಿಲ್ಲ ?

ನಾವಿಂದು ಶಾಸ್ತ್ರಗಳನ್ನು ಹಿಡಿದಿಲ್ಲ. ಹೇಳಿಕೆಗಷ್ಟೇ ಹರಡಿದ್ದೇವೆ. ಅದೂ ಬಾಯಿಪಾಠದಲ್ಲೂ; ಶುದ್ಧಪಾಠದ ಹೊತ್ತಗೇನು ಹತ್ತಿರದಲ್ಲಿಲ್ಲ. ಇದಕ್ಕೊಂದು ಉದಾಹರಣೆ "ವಕ್ರತುಂಡ ಮಹಾಕಾಯ ಕೋಟಿಸೂರ್ಯ ಸಮಪ್ರಭ". ಇದು ಗಣಪತಿಯ ಪ್ರಾರ್ಥನೆಯೇ ಹೌದಾದರೆ ಆತ ಕೋಟಿಗಟ್ಟಲೆ ಸೂರ್ಯರಿಗೆ ಸಮಾನವಾಗಿಲ್ಲ. ಸುಳ್ಳು ಬಣ್ಣನೆ. ಒಂದು ಸೂರ್ಯನಿಗೂ ಸಮನಲ್ಲನೀತ. ಏನಾದರೇನಂತೆ ? ಎನ್ನುವಂತಿಲ್ಲ.

ಯೋಽನ್ಯಥಾ ಸನ್ತಮಾತ್ಮಾನಂ ಅನ್ಯಥಾ ಪ್ರತಿಪದ್ಯತೇ |
ಕಿಂ ತೇನ ನ ಕೃತಂ ಪಾಪಂ ಚೋರೇಣಾತ್ಮಾಽಪಹಾರಿಣಾ ||

ಎಂದು ಮಹಾಭಾರತ ಅಂದಂತೆ ಇರುವುದೊಂದು ಬಗೆ ತಿಳಿದದ್ದು ಇನ್ನೊಂದು ಬಗೆಯೆಂದಾದರೆ ಪಾಯಸವೆಂದೆಣಿಸಿ ಪಾಯ್ಸನ್ ಕುಡಿದಂತೆ. ನಮಗೆ ದೇವ-ದೇವತೆಗಳ ಬಗ್ಗೆ ಹೆಸರತ್ತಿ ತಿಳಿಸಿದ್ದು ಶಾಸ್ತ್ರಗಳೆಂದ ಮೇಲೆ ಅವರ ಶುದ್ಧವಾದ ಪರಿಚಯ-ಲಕ್ಷಣಗಳನ್ನು ಅದೇ ಶಾಸ್ತ್ರಗಳು ಹೇಳಿವೆ. ಇದನ್ನು ಆಚೇಚೆನೋಡಿ ಚೆನ್ನಾಗಿ ಅರಿತು ವ್ಯವಹರಿಸಿದರೇನೇ ಶಾಸ್ತ್ರೋಕ್ತವಾದ ಫಲ-ಫಲಿತಾಂಶಗಳು ಹೊರತು ನಮ್ಮಿಷ್ಟದಂತೆ ನಾವು ನಡೆದರೆ ನುಡಿದರೆ ದುರ್ಗತಿಯೇ ಸರಿ ಎಂಬುದಾಗಿ ಕೃಷ್ಣನ ಮಾತು -

ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ |
ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಮ್ ||

ತನ್ನ ತಂದೆ ಇವನೆಂದು ತಪ್ಪಾಗಿ ತಿಳಿದ ಪಿತೃಕನ್ಯೆ ಅಚ್ಛೋದೆ ಪಿತೃಶಾಪದಿಂದ ಮತ್ಸ್ಯಗಂಧಿಯಾಗಿ ಇಳೆಗೆ ಇಳಿಯುವಂತಾಯಿತು ಎಂಬ ಇತಿಹಾಸವಾಗಿರುವಾಗ ದೇವದೇವತೆಗಳ ಪರಿವಾರವನ್ನೆಲ್ಲಾ ಚೆನ್ನಾಗಿ ಅರಿಯದೇ ನಮ್ಮ ಮಂದಿರ-ಗೋಪುರಗಳಲ್ಲಿ ನಾವು ಅವರನ್ನು ಇಷ್ಟಬಂದಂತೆ ಕೆತ್ತಿದರೆ ಬಿತ್ತಿದರೆ ನಮಗೆ ಪಾಪ ಮೆತ್ತಿಕೊಳ್ಳದಿರದು (ಗಮನಿಸಿ ಕುದುರೆ ಮೋರೆಯ ಕಲ್ಕಿಯನ್ನು, ಇದು ಪೂರ್ತಿ ತಪ್ಪು).

ಉದಯಿಸುವ ಸೂರ್ಯನನ್ನು ಬಾಲಸೂರ್ಯನೆಂದು ಕರೆಯುವರು. ಆಗ ಅವನು ಕೆಂಪು ಕೆಂಪಗಿರುವನು. ಹೀಗೆ 'ರಕ್ತಾಂಬರ ರಕ್ತತನೂ ರಕ್ತಮಾಲ್ಯಾನುಲೇಪನ' ಗಣಪ ಕೆಂಪಾಗಿ ಇರಲಾಗಿ ಅವನನ್ನು ವಕ್ರತುಂಡ ಮಹಾಕಾಯ ಬಾಲಸೂರ್ಯಸಮಪ್ರಭನೆಂದು ಕರೆದಿದ್ದರು. ಹಚ್ಚಿಕೊಳ್ಳುವ ಚಕ್ರಮುದ್ರೆಯ ಮಂತ್ರದಲ್ಲಿ ಸುದರ್ಶನ ಮಹಾಜ್ವಾಲ ಕೋಟಿಸೂರ್ಯಸಮಪ್ರಭ ಎಂದು ಇದ್ದದ್ದು ಗಣಪತಿಸ್ತುತಿಗೆ ತಪ್ಪಾಗಿ ಅಂಟಿಕೊಂಡು ನಾವು ವಂಶಪರಂಪರೆಯಿಂದ ಈ ತಪ್ಪು ರಹಸ್ಯವನ್ನು ಕಾಪಾಡಿಕೊಂಡು ಬಂದಿದ್ದೇವೆ; ಮುಂದುವರಿಸಿದ್ದೇವೆ. ಈಗ ಕೇಳಿ ಹೇಳಿ ತಿದ್ದಿಕೊಳ್ಳುವ ಎಂದರೆ ಪ್ರತಿಷ್ಠೆ, ಮಡಿವಂತಿಕೆ, ಬಾಯಿಪಾಠ, ಗುರೂಪದೇಶ ಎಲ್ಲವೂ ಅಡ್ಡಬರುತ್ತದೆ; ತಲೆಯೊಂದು ಬಿಟ್ಟು. ವಿನಾಯಕ ಮಾತ್ರವೇನು ! ಸೂರ್ಯ, ಸ್ಕಂದ, ಶಿವ, ದುರ್ಗೆ ಎಲ್ಲರ ಬಗ್ಗೆಯೂ ನಮಗೆ ಪರಿಶುದ್ಧವಾದ ಪರಿಚಯ ಕಡಿಮೆಯೆ.

ಇವರೆಲ್ಲ ಯಾರು ? ಎಲ್ಲರೂ ಒಂದೇ ಹೆಸರು ಮಾತ್ರ ಬೇರೆ ಬೇರೆ ಎಂಬ ವಾದಕ್ಕೂ ಕಮ್ಮಿಯಿಲ್ಲ. ಇವರಿಗೆ ಕೃಷ್ಣನ ಮಾತೇ ತಡೆಯಾಗುತ್ತಿದೆ.

ಯಾನ್ತಿ ದೇವವ್ರತಾ ದೇವಾನ್ ಪಿತೄನ್ ಯಾನ್ತಿ ಪಿತೃವ್ರತಾಃ |
ಭೂತಾನಿ ಯಾನ್ತಿ ಭೂತೇಜ್ಯಾ ಯಾನ್ತಿ ಮದ್ಯಾಜಿನೋಽಪಿ ಮಾಮ್ ||

ಇಲ್ಲಿ ನಾಕು ಸೇರುದಾಣಗಳನ್ನು ಕೃಷ್ಣ ಸ್ಪಷ್ಟಪಡಿಸಿದ್ದಾನೆ. ಎಲ್ಲರೂ ವೈಕುಂಠಕ್ಕೆ ಬಾರರೆಂದ ಕೃಷ್ಣ ಉಳಿದವರಿದ್ದಾರೆ ಪರಿವಾರ ದೇವತೆಗಳು ನನ್ನವರು. ನನ್ನ ಬಿಟ್ಟು ಅವರನ್ನೂ ಚೆನ್ನಾಗಿ ಆರಾಧಿಸುವವರಿದ್ದಾರೆ. ಅವರ ಪೂಜೆಯೂ ನನಗೆ ಸಿಗುವುದು ಎಂದಾದರೂ ಅವರ ತಪ್ಪು ಚಿಂತನೆಗಾಗಿ ಅಡ್ಡ ಆಚರಣೆಗಾಗಿ ಅವರು ಜಾರಿ ಬೀಳುವವರೆಂದೇ ಕೃಷ್ಣ ಎಚ್ಚರಿಸಿದ್ದಾನೆ –

ಯೇಽಪ್ಯನ್ಯದೇವತಾ ಭಕ್ತಾ ಯಜನ್ತೇ ಶ್ರದ್ಧಯಾಽನ್ವಿತಾಃ ।
ತೇಽಪಿ ಮಾಮೇವ ಕೌನ್ತೇಯ ಯಜನ್ತ್ಯವಿಧಿಪೂರ್ವಕಮ್ ॥
ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ |
ನ ತು ಮಾಮಭಿಜಾನನ್ತಿ ತತ್ತ್ವೇನಾತಶ್ಚ್ಯವನ್ತಿ ತೇ ॥

ಮತ್ತೆ ನಮಗೆ ವಿಘ್ನನಿವೃತ್ತಿ, ಆರೋಗ್ಯ, ಸಂತಾನ, ಆಯುಷ್ಯ, ಐಶ್ವರ್ಯ, ಎಲ್ಲಾ ಬೇಕಾಗಿದೆ ತಾನೆ ಅದಕ್ಕಾಗಿ ಆ ಎಲ್ಲ ದೇವತೆಗಳ ಸಮಾರಾಧನೆ ಬೇಕೇ ಬೇಕಲ್ಲವೆ. ಕೃಷ್ಣನೊಬ್ಬನಿದ್ದರೆ ಆಗದು; ಅವರೆಲ್ಲರೊಳಗೆ ಅವನ್ನೊಬ್ಬನನ್ನು ಕರೆದರೂ ಸಾಲದು ಎನ್ನುವ ತಪ್ಪು ಕಲ್ಪನೆಯಿಂದ ನಾಲಗೆ ಹಾರಿಸುವವರಿದ್ದಾರೆ. ಅನ್ನವು ಸ್ವತಂತ್ರವಾಗಿ ಮುಖ್ಯ ಆಹಾರವಾದರೂ ಪಲ್ಯ ಸಾರು ಹುಳಿ ಎಲ್ಲ ಬೇಡವೇ ಎಂದು ಅಡಿಗೆ ಮಾಡುವವರಿದ್ದಾರೆ. ಅದಕ್ಕೆ ಕೃಷ್ಣನ ನೇರ ಉತ್ತರ -

ಅನನ್ಯಾಶ್ಚಿನ್ತಯನ್ತೋ ಮಾಂ ಯೇ ಜನಾಃ ಪರ್ಯುಪಾಸತೇ |
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥

ಎಲ್ಲದರ ಪ್ರಾಪ್ತಿ-ಹೊಣೆಗಾರಿಕೆ ನನ್ನದೆಂದ "ಯೋಗಕ್ಷೇಮಂ ವಹಾಮ್ಯಹಂ" ಉಳಿದವರ ಪ್ರಾಮುಖ್ಯ ಸುದ್ದಿ ಬಿಟ್ಟು ಪರಿವಾರರನ್ನಾಗಿ ನನ್ನ ತೀರ್ಥ-ಪ್ರಸಾದ ಕೊಟ್ಟು ಸಂತೈಸುವುದಾದರೆ ಬನ್ನಿ ಇಲ್ಲವಾದರೆ ನನ್ನ ಲೋಕ ಇಲ್ಲ ಎಂಬ ನಿಶ್ಚಿತ ಆದೇಶ ಕೃಷ್ಣನದ್ದು.

ದೇವೇಷು ವರ್ತತೇ ಯದ್ವೈ ತದ್ಧಿ ಸರ್ವಂ ಜನಾರ್ದನಾತ್ |
ಯತ್ಪ್ರವೃತ್ತಂ ಚ ದೇವೇಭ್ಯಸ್ತದ್ ವಿದ್ಧಿ ಮಧುಸೂದನಾತ್ ||
- ಹರಿವಂಶ

ದೇವತೆಗಳಲ್ಲಿ ಇರುವ ಎಲ್ಲಾ ಬಗೆಯ ಅಧಿಕಾರವಾಗಲಿ, ಕೊಡುವ ಶಕ್ತಿ ಯೋಗ್ಯತೆಯಾಗಲಿ ಇದೆಲ್ಲವೂ ಅವರ ಸ್ವಂತಿಕೆಯಿಂದಲ್ಲ. ಅವರು ನಾರಾಯಣನನ್ನು ವಿವಿಧ ಪರಿಯಲ್ಲಿ ತಪಗೈದರ ಫಲಿತವೇ ಆಗಿದೆ. ಇದನ್ನು ನಾವು ದೇವತಾಮೀಮಾಂಸೆಗಳಲ್ಲಿ ಅರಿಯಬಹುದು.

ಸರ್ವೋತ್ಕೃಷ್ಟಂ ಕೇಶವಂ ಚ ವಿಹಾಯಾನ್ಯಮುಪಾಸತೇ |
ತೇಷಾಮನ್ಧಂ ತಮೋ ಜ್ಞೇಯಂ ಪಿತೄಣಾಂ ಗುರುಣಾಮಪಿ ||

ಪರಸ್ಪರ ದೇವತೆಗಳ ಸೇವೆಯಿಂದ ಅವರವರಲ್ಲಿ ಶಕ್ತಿವಿಶೇಷಗಳ ಆವಿರ್ಭಾವ ಎಂಬ ವಾದ ಪ್ರಮಾಣಸಂಗತವಲ್ಲ. ಬ್ರಹ್ಮರುದ್ರರ ನಿಯಾಮಕನಾದ ಹರಿಯ ಪಾರಮ್ಯವನ್ನು ಒಪ್ಪದೆ ತಿಳಿಯದೆ ಇತರ ಯಾರನ್ನು ಎಷ್ಟುದೊಡ್ಡಮಟ್ಟಿನಲ್ಲಿ ಉಪಾಸನೆಗೈದರು ಲಾಭವಿಲ್ಲ. ಅಷ್ಟೇ ಅಲ್ಲ ಅಧೋಗತಿಯೇ ಎನ್ನುವುದಾಗಿ ಗರುಡಪುರಾಣ ಎಚ್ಚರಿಸಿದೆ. ಈ ಅಸದುಪಾಸನೆಯು ತನಗಷ್ಟೇ ಅಲ್ಲದೆ ತನ್ನ ವಂಶದವರನ್ನು ಮುಳುಗಿಸುತ್ತದೆ. ತಪ್ಪು ತಿದ್ದದ ತಪ್ಪು ಹೇಳಿದ ಗುರುಗಳ ದುರ್ಗತಿಗೂ ಈ ಆರಾಧನೆ ಅದ್ದಪರಿಣಾಮ ನೀಡಲಿದೆ.

ಹರಿಭಕ್ತಿವಿಹೀನಾ ಯೇ ಹ್ಯಸುರಾಃ ಪರಿಕೀರ್ತಿತಾಃ |
- ಗರುಡಪುರಾಣ

ಇಷ್ಟು ಗೊತ್ತಿದ್ದರು ನಮ್ಮೆಲ್ಲರ ತೊಂದರೆ ನಿವಾರಕನಾದ ಹರಿಯಮೇಲೆ ವಿಶ್ವಾಸ ಬರುವುದಿಲ್ಲವೆಂದಾದರೆ ಅವನು ಅಸುರನೇ ಆಗಿರಬೇಕು ಎಂದವನ ಸ್ವಭಾವವಾದವನ್ನು ಗುರುತಿಸಿಕೊಳ್ಳಬಹುದು. ಇಂತವರ ಸಹವಾಸದಿಂದ ನಾವು ನಮ್ಮನ್ನು ದೂರಗೊಳ್ಳುವಂತೆ ಎಚ್ಚರಗೊಳ್ಳಬೇಕು.

ಸಾಳಗ್ರಾಮಂ ವಿಹಾಯೈವ ನಮನಂ ಯೇ ಪ್ರಕುರ್ವತೇ |
ತೇ ಸರ್ವೇ ಹರಿನಿನ್ದಾಯಾಮಧಿಕಾರಿಣ ಏವ ಹಿ ||
- ಗರುಡಪುರಾಣ

ಇತರ ದೇವತೆಗಳ ಉಪಾಸನೆಯಲ್ಲಿಯೂ ಹರಿಯ ನಿತ್ಯಸನ್ನಿಧಾನವುಳ್ಳ ಸಾಳಗ್ರಾಮಗಳ ಇರುವಿಕೆಯನ್ನು ಖಚಿತಪಡಿಸಿಕೊಳ್ಳಬೇಕು. ಅಲ್ಲಿನ ತೀರ್ಥ ಪ್ರಸಾದಗಳ ಸೇವನೆಯಲ್ಲಿ ಆ ದೇವತೆಗಳ ಪ್ರದಕ್ಷಿಣೆ ನಮಸ್ಕಾರ ಪುರಸ್ಕಾರಗಳು ಸಾಳಗ್ರಾಮಗಳ ಸಂಪರ್ಕ ಇಲ್ಲವಾದರೆ ಆತ ಬ್ರಹ್ಮಹತ್ಯೆಯ ದೋಷಕ್ಕೆ ಪಾತ್ರನಾದಾನು. ಇತ್ತೀಚೆಗಿನ ದಿನಗಳಲ್ಲಿ ಹಲವೆಡೆ

ಸಾಳಗ್ರಾಮಗಳ ಸ್ಥಾನಾಂತರದ ಬಗ್ಗೆ ಹೆಚ್ಚು ಸುದ್ದಿಗಳು ನಡೆಯುತ್ತಿವೆ. ಲೋಕದಲ್ಲಿ ನಡೆಯುವ ಮತಾಂತರದ ಹಾವಳಿಯಂತೆ ಅಲ್ಲೂ ಮತ್ತೆ ಸ್ವಮತಕ್ಕೆ ಪುನಃ ಪ್ರವೇಶ ಸಿದ್ಧಿಸುತ್ತವೆ. ಅದರಂತೆ ಕೋಟ್ಯಂತರ ವರುಷಗಳ ಇತಿಹಾಸವುಳ್ಳ; ಪುರಾಣಪುಟಗಳಲ್ಲಿ ಲಕ್ಷಣಪಡೆದ ಸಾಳಗ್ರಾಮಗಳ ಮಹತ್ತಿಗೆ ಅನೂಹ್ಯವಾದದ್ದು. ಅದರಶಕ್ತಿಯೂ ಅನಂತವಾಗಿದೆ. ಅದು ಮತ್ತೆ ದೇವಗೃಹಗಳ ಅಲಂಕರಿಸುವಂತಾಗಲಿ. ಒಳಿತಿನ ತಂತ್ರಪದ್ಧತಿಯೆಡೆಗೆ ಬದಲಾವಣೆ ತಪ್ಪಿಲ್ಲ. 'ಅಸತೋ ಮಾ ಸದ್ಗಮಯ' ಎಂದಂತೆ ತಾಮಸ-ರಾಜಸಮಾರ್ಗಾಚಾರಗಳಿಂದ ಸಾತ್ವಿಕ ಸಮಯಾಚಾರಕ್ಕೆ ಪೂಜೆಯ ಎಲ್ಲಾ ಅಂಶಗಳನ್ನು ಬದಲಾಯಿಸಿಕೊಳ್ಳಬೇಕು ಎಂಬಲ್ಲಿ ಸಂಹಿತೆಗಳೇ ಕೊರಳೆತ್ತಿ ಆದೇಶಿಸಿವೆ.

ತಾಮಸೇನ ತು ಮಾರ್ಗೇಣ ಪೂಜನಂ ಯತ್ರ ವರ್ತತೇ |
ತತ್ರಾಪಿ ರಾಜಸೇನೈವ ಪೂಜನಂ ಸಿದ್ಧಿದಂ ಭವೇತ್ ||
ರಾಜಸೇನ ತು ಪೂಜಾದ್ಯಂ ವರ್ತತೇ ಯತ್ರ ನಿತ್ಯಶಃ |
ತತ್ರಾಪಿ ಸಾತ್ವಿಕೇನೈವ ಪೂಜನಂ ಶುಭದಂ ಸದಾ ||
ಸಾತ್ವಿಕೇನ ತು ಪೂಜಾದ್ಯಂ ವರ್ತತೇ ಯತ್ರ ಚಾನ್ವಹಮ್ |
ತತ್ರ ರಾಜಸಮಾರ್ಗೇಣ ನ ಕುರ್ಯಾತ್ ಪೂಜನಾದಿಕಮ್ ||
ಯತ್ರ ರಾಜಸಮಾರ್ಗೇಣ ಪ್ರವೃತ್ತಂ ತ್ವರ್ಚನಾದಿಕಮ್ |
ತತ್ರ ತಾಮಸಮಾರ್ಗೇಣ ನ ಕುರ್ಯಾದರ್ಚನಾದಿಕಮ್ ||
ವಿವಿಧಾನಾಂ ರಾಜಸಾನಾಮನ್ಯೋನ್ಯಂ ಸ್ಯಾನ್ನ ಸಂಕರಃ |
ಸರ್ವತ್ರ ಪೌರುಷೇ ವಾಕ್ಯೇ ತದ್ಗ್ರಾಹ್ಯಮವಿರೋಧಿ ಯತ್ ||

- ಈಶ್ವರಸಂಹಿತಾ

ಎಲ್ಲಾ ಬದಲಾವಣೆಗಳು ಒಂದು ದೊಡ್ಡಸೂತ್ರವನ್ನು ಇಟ್ಟುಕೊಂಡಿವೆ. ಅದನ್ನು ಲಿಂಗಪುರಾಣವು ಎತ್ತಿ ಹೇಳಿದೆ -

ಆಲೋಡ್ಯ ಸರ್ವಶಾಸ್ತ್ರಾಣಿ ವಿಚಾರ್ಯ ಚ ಪುನಃ ಪುನಃ |
ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಃ ಸದಾ ||

ಎಲ್ಲಾ ತಂತ್ರಗಳ ಒಟ್ಟು ಅಭಿಪ್ರಾಯ ನಿರಂತರ ನಾರಾಯಣನ ಆರಾಧನೆ. ಇದು ಶಾಸ್ತ್ರಕ್ಕೆ ಮಾತ್ರನಿಲುಕುವ ಸಂಗತಿಯೆಂದು ದೂರಬೇಡಿ. ಇದು ಪುರಾಣೋಕ್ತ ಎಂಬುದಾಗಿ ನಗಣ್ಯಮಾಡಬೇಡಿ. ವೇದದನುಡಿಯು ಹೀಗಿದೆ ಕೇಳಿ –

ಯಚ್ಚ ಕಿಂಚಿತ್ ಜಗತ್ಸರ್ವಂ ದೃಶ್ಯತೇ ಶ್ರೂಯತೇಽಪಿ ವಾ |
ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ ||

ಪ್ರತ್ಯಕ್ಷದಲ್ಲಿಯೂ ನಾರಾಯಣನ ಸರ್ವವ್ಯಾಪ್ತಿಯನ್ನು ಅರ್ಥೈಸಲಾಗಿದೆ. ಎಲ್ಲಾ ದೇವತೆಗಳು ತಮ್ಮ ತಮ್ಮ ಸಿದ್ಧಿಗಾಗಿ ಹರಿಯನ್ನೇ ಆರಾಧಿಸುತ್ತಿರುವಾಗ ನಾವೇಕೆ ಬಗೆಬಗೆಯ ದೇವತೆಗಳಲ್ಲೆ ಸುತ್ತುತ್ತಿರಬೇಕು ? ಸಮಸ್ತ ವೇದಸಾರವೆನಿಸಿದ ಪುರುಷಸೂಕ್ತ ಕೊನೆಗೆ ಸಂದೇಶಿಸಿದ್ದೇ ಹಾಗೆ. ಮರೆತಿರೇನು ?

ಯಜ್ಞೇನ ಯಜ್ಞಂ ಅಯಜಂತ ದೇವಾಃ ತಾನಿ ಧರ್ಮಾಣಿ ಪ್ರಥಮಾನ್ಯಾಸನ್ |
ತೇ ಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ||

ಎಲ್ಲ ದೇವತೆಗಳು ಮಾಡಿದ ಆ ದೊಡ್ಡದೇವರ ಪೂಜೆಯೆ ಮುಂದೆ ಎಲ್ಲರಿಗೂ ಮುಖ್ಯ ಧರ್ಮವಾಯಿತು ಎಂದಾಗ ಬಿಡುವುದೇಕೆ ಪ್ರಥಮಧರ್ಮವನ್ನು ? ಬ್ರಹ್ಮಾದಿಗಳು ಮಾಡಿದಂತೆ ದೇವರ ಸೇವೆಗೈದರೆ ದೇವರೂ ಬರ್ತಾನೆ ಇತರರೂ ಸಿಗ್ತಾರೆ.

ಮನ್ತ್ರತನ್ತ್ರವಿಹೀನೇ ತು ಸರ್ವಂ ಕರ್ಮಾಸುರಂ ಭವೇತ್ |

ಎಂದು ಅನಿರುದ್ಧಸಂಹಿತೆ ಹೇಳಿದಂತೆ ಇಲ್ಲಿದೆ ಮಂತ್ರಗಳು ತಂತ್ರಗಳು. ಅರಿತು ಬಳಸಿ ದೇವನ ಆರಾಧನೆ ನಡೆಯಲಿ.

ಅಗ್ನಿರ್ಹೋತಾ ಕವಿಕ್ರತುಃ ಸತ್ಯಶ್ಚಿತ್ರಃ ಶ್ರವಸ್ತಮಃ | ದೇವೋ ದೇವೇಭಿರಾಗಮತ್ ||

ಮಾತಿನ ಅಧಿದೇವತೆ ಅಗ್ನಿ ಮಂತ್ರಗಳನ್ನು ಸ್ಪಷ್ಟಹೇಳಿ ಅದಕ್ಕೆ ಸಂಬಂಧಪಟ್ಟ ದೇವತೆಯನ್ನು ಕರೆಯಲಿ. ಹತ್ತು ಪ್ರಾಣರು ಅಗ್ನಿರೂಪರು ಶರೀರವ್ಯಾಪ್ತರೂ ದೇವಾರಾಧನೆಯನ್ನು ಕರ್ಮವನ್ನು ಬಂಧನವಿಲ್ಲದಂತೆ ನಡೆಸಿಕೊಡಲಿ. ಕರ್ಮ ತಂತ್ರದಿಂದ ದಾಟಿಸಲಿ. ದೇವದೇವತೆಗಳ ಎಚ್ಚರವನ್ನು ತಂದುಕೊಡಲಿ. ಅಗ್ನಿ ನಾರಾಯಣನು ಮಾನಸ

ವ್ಯಾಪಾರದಲ್ಲಿ ಧ್ಯಾನಕೇಂದ್ರದಲ್ಲಿ ಶಾಸ್ತ್ರಪ್ರಸಿದ್ಧನಾದ ಧ್ಯೇಯಮೂರ್ತಿಯನ್ನು ನಿರ್ದುಷ್ಟನಾಗಿ ಬೆಳಗಿಸಿ ಅಂತರ್ದರ್ಶನಕ್ಕೆ ಅನುವುಮಾಡಲಿ. ಕಾಣುವಾಗ ದೇವರು ಎಲ್ಲಾ ದೇವತೆಗಳೊಡನೆ ಪೀಠಾವರಣ ಆಯುಧಾಭರಣ ವಾಹನಾಸನಪರಿಗ್ರಹಸಮೇತನಾಗಿರಲಿ.

ಹುರುಪು ತುಂಬಿದ ಹರೆಯದೊಡನೆ ಶುದ್ಧಮಾಧ್ವದೀಕ್ಷೆಯ ನೆರಳಿನಲ್ಲಿ ತಂತ್ರಸಂಹಿತೆಗಳ ಒಳಹೊಕ್ಕು ತುಂಬು ಉಪಸ್ಥಿತಿಯೊಡನೆ ಉಪಯೋಗಗಳನ್ನು ಹರವಿಹಾಕಿದ ಅರ್ಚಕಪ್ರಭಾವದಿಂದ ಪಾಜಕದ ಹತ್ತಿರದ ಸುದರ್ಶನ ಮಾಡಿದ ವೈಷ್ಣವಸಾಹಸಕ್ಕೆ ಮೆಚ್ಚುಗೆಯಿದೆ. ಬಿಚ್ಚು ಮನಸ್ಸಿನ ಧಾರಾಳಹೃದಯದ ಅರ್ಚಕರು ಬೇಕಾಗಿದ್ದಾರೆ ಅನಿಸುತ್ತೆ. ಆದಷ್ಟು ಬೇಗನೆ ಹಲವು ದೇವರ ಪ್ರತೀಕಗಳ ಆರಾಧನೆಯ ಆಚಾರ್ಯಸ್ಥಾನ ಲಭಿಸಲೆಂದು ಹಾರೈಸುವೆ.

- ಡಾ. ಶತಾವಧಾನಿ ಉಡುಪಿ ರಾಮನಾಥ ಆಚಾರ್ಯ

"ಯಜ್ಞೇನ ಯಜ್ಞಂ ಅಯಜಂತ ದೇವಾಃ" ಯಜ್ಞದಮೂಲಕ ಯಜ್ಞನನ್ನು ದೇವತೆಗಳು ಆರಾಧಿಸಿದರು ಎಂಬಲ್ಲಿ ಯಜ್ಞ ಎಂಬುದು ವಿಷ್ಣುವನ್ನೇ ಸೂಚಿಸುವಂತದ್ದು ಎಂಬುದಾಗಿ ವೇದಶಾಸ್ತ್ರಗಳ ಮಾತುಗಳು - ವಿಷ್ಣುರ್ವೈ ಯಜ್ಞಃ | (ಐತರೇಯ ಬ್ರಾಹ್ಮಣ), ಯಜ್ಞೋ ವೈ ವಿಷ್ಣುಃ | (ಐತರೇಯ ಬ್ರಾಹ್ಮಣ, ಶತಪಥ ಬ್ರಾಹ್ಮಣ, ತೈತ್ತರೀಯಸಂಹಿತಾ, ಜೈಮಿನಿಬ್ರಾಹ್ಮಣ), ಯೋ ವೈ ವಿಷ್ಣುಃ ಸ ಯಜ್ಞಃ | (ಶತಪಥ ಬ್ರಾಹ್ಮಣ) ಸ ದೇವಾನಾಗ್ಂ ಶ್ರೇಷ್ಠೋಽಭವತ್ತಸ್ಮಾದಾಹುರ್ವಿಷ್ಣುರ್ದೇವಾನಾಂ ಶ್ರೇಷ್ಠಃ ಇತಿ | ಸ ಯಃ ಸ ವಿಷ್ಣುರ್ಯಜ್ಞಃ ಸಃ | (ಶತಪಥ ಬ್ರಾಹ್ಮಣ), ವಿಷ್ಣವೇ ಹಿ ಗೃಹ್ಣಾತಿ ಯೋ ಯಜ್ಞಾಯ ಹವಿಃ ಗೃಹ್ಣಾತಿ | (ಶತಪಥ ಬ್ರಾಹ್ಮಣ), ಪುರುಷೋ ವೈ ಯಜ್ಞಃ | ಪುರುಷೋ ಹ ವೈ ನಾರಾಯಣಃ | (ಶತಪಥ ಬ್ರಾಹ್ಮಣ) ಏಷ ವಿಷ್ಣುರ್ಯಜ್ಞಃ (ಶತಪಥ ಬ್ರಾಹ್ಮಣ) ಯಜ್ಞೋ ವೈ ವಿಷ್ಣುಃ ಶಿಪಿವಿಷ್ಟಃ | (ತಾಂಡ್ಯಬ್ರಾಹ್ಮಣ), ಯಜ್ಞೋ ವೈ ವಿಷ್ಣುವಾರುಣಃ | (ಕೌಷೀತಕೀ ಬ್ರಾಹ್ಮಣ), ಯಜ್ಞೋ ವಿಷ್ಣುಃ ಪ್ರಜಾಪತಿಃ | (ಮೈತ್ರಾಯಣೀಯಸಂಹಿತಾ) ವಿಷ್ಣುರ್ಯಜ್ಞಃ (ಗೋಪಥ ಬ್ರಾಹ್ಮಣ), ಯಜ್ಞೋ ವಿಷ್ಣುಃ | (ಪಂಚವಿಂಶಬ್ರಾಹ್ಮಣ, ಜೈಮಿನಿಬ್ರಾಹ್ಮಣ, ಕಾಣ್ವಬ್ರಾಹ್ಮಣ) ಪುರುಷೋ ವೈ ಯಜ್ಞಃ | (ಸಾಂಖ್ಯಾಯನಬ್ರಾಹ್ಮಣ) ವಿಷ್ಣುರ್ವೈ ಯಜ್ಞಃ ವೈಷ್ಣವೋ ಯಜಮಾನಃ (ಕಪಿಷ್ಠಲಸಂಹಿತಾ)

|| ಶ್ರೀಗುರುಭ್ಯೋ ನಮಃ ||

|| ಹರಿಃ ಓಮ್ ||

|| ಮಾಧ್ವೀರ್ಗಾವೋ ಭವನ್ತು ನಃ ||

ವಿಷ್ಣುಸ್ಮೃತಿ ವಿಹೀನಾ ತು ಪೂಜಾ ಸ್ಯಾದಾಸುರೀ ಸದಾ |

ಎನ್ನುವ ಮೂಲಕ ಶ್ರೀಮದಾಚಾರ್ಯರು ಸಕಲಗುಣೋಪೇತನೂ, ದೋಷಲೇಶ ರಹಿತನೂ ಆದ ಭಗವಂತನ ಸ್ಮರಣೆಯಿಲ್ಲದೇ ಮಾಡುವ ಪೂಜಾದಿಗಳು ಅಸುರೀಭಾವವನ್ನು ಪಡೆಯುವುದಾಗಿ ಎಚ್ಚರಿಸಿರುವರು. ಹೀಗಾಗಿ, ತಾಂತ್ರಿಕನಾದ ಸಾಧಕನು ಇತರ ದೇವತೆಗಳ ಆರಾಧನಾ ಪಕ್ಷದಲ್ಲಿಯೂ 'ಅಂತರ್ಯಾಮಿಯಾಗಿ ನೆಲೆಗೊಂಡು, ತತ್ತಚ್ಛಕ್ತಿ ಪ್ರೇರಕನಾದ ಭಗವಂತನನ್ನು' ಆರಾಧಿಸುವುದು ಶ್ರೀಮದಾಚಾರ್ಯರಿಗೆ ಅಭಿಪ್ರೇತವಾದುದಾಗಿದೆ. ಅರ್ಥಾತ್ ಭಗವಂತನಿಗೆ ಸಮ್ಮತವಾದ ಪಕ್ಷ ಇದುವೇ ಆಗಿದೆ.

ರಾಜಸ-ತಾಮಸ ತಂತ್ರಗಳ ಪ್ರಯೋಗದಿಂದ, ಅನುಸಂಧಾನಾದಿ ಭಕ್ತಿಪ್ರವರ್ಧಕ ಅಂಶಗಳಿಲ್ಲದೇ ಶುಷ್ಕಕೈಕಾಟದಿಂದ ಜನರನ್ನು ಮಾತ್ರವೇ ರಂಜಿಸಲು ಉದ್ಯುಕ್ತವಾಗಿರುವ ಈಗಿನ ತಂತ್ರಪ್ರಪಂಚದಲ್ಲಿ ಯುಕ್ತಿಯುಕ್ತವಾಗಿ, ಭಕ್ತಿಪೂರ್ವಕವಾಗಿ, ಭಗವದನುಗ್ರಹ ಸಂಪಾದನೆಗಾಗಿ ಅನುಸರಿಸಲೇ ಬೇಕಾದ ತಂತ್ರಮಾರ್ಗಗಳನ್ನು ವಿಸ್ತ್ರುತವಾದ ತಂತ್ರರಾಶಿಗಳಿಂದ ಹುಡುಕಿ ತೆಗೆದು ಏಕತ್ರಕ್ರೋಢೀಕರಿಸಿರುವ 'ವೈಷ್ಣವ ತಂತ್ರಮ್' ವು ಸಾಧನೆಯ ಹಂಬಲವುಳ್ಳ ವ್ಯಕ್ತಿಗೆ ಹೆಚ್ಚಿನ ಸಹಕಾರವನ್ನು ನೀಡಬಲ್ಲದು. ಇಂತಹ ಸಂಗ್ರಹಯೋಗ್ಯವಾದ ಗ್ರಂಥವನ್ನು ಸಮಾಜಕ್ಕೆ ನೀಡುತ್ತಿರುವ ಮಿತ್ರರಾದ ಬೆಳ್ಳೆ ಸುದರ್ಶನ ಆಚಾರ್ಯ ಇವರ ಪ್ರಯತ್ನವನ್ನು ತುಂಬು ಹೃದಯದಿಂದ ಅಭಿನಂದಿಸುತ್ತಾ, ಮುಂದೆಯೂ ಇವರಿಂದ ಸತ್ಪಥಪ್ರದರ್ಶಕಗ್ರಂಥಗಳು ರಚಿಸಲ್ಪಡಲಿ ಎಂಬುದಾಗಿ ಶ್ರೀಮಧ್ವವಲ್ಲಭ ಶ್ರೀವೇದವ್ಯಾಸರಲ್ಲಿ ಕೇಳಿಕೊಳ್ಳುವೆನು.

|| ಶ್ರೀಕೃಷ್ಣಾರ್ಪಣಮಸ್ತು ||

- ಪುತ್ತೂರು ವಾದಿರಾಜ ತಂತ್ರೀ,

ಉಡುಪಿ.

|| ಕೃಷ್ಣಂ ವಂದೇ ಜಗದ್ಗುರುಮ್ ||

"ವೈಷ್ಣವತಂತ್ರಮ್" ಎಂಬ ಗ್ರಂಥ ಧಾರ್ಮಿಕ ವಿಧಿಗಳನ್ನು ನಡೆಸುವಲ್ಲಿ ಉತ್ತಮ ಸಹಕಾರಿಯಾಗಿದೆ. ಏಕೆಂದರೆ "ಯದೇವ ವಿದ್ಯಯಾ ಕರೋತಿ ತದೇವ ವೀರ್ಯವತ್ತರಂ ಭವತಿ" ಎಂಬ ಶಾಸ್ತ್ರವಚನದಂತೆ ನಾವು ಮಾಡುವ ಕರ್ಮ ಕೇವಲ ಜಡಕರ್ಮಗಳಾಗಬಾರದು, ಆ ಕರ್ಮಾಭಿಮಾನಿಯಾದ ದೇವತಾಂತರ್ಯಾಮಿಯಾದ ಹರಿಯನ್ನು ಸ್ಮರಣೆಮಾಡುತ್ತಾ ಆ ಕರ್ಮದ ಫಲವನ್ನು ಹರಿಗೆ ಅರ್ಪಿಸಿದಾಗಲೇ ಕರ್ಮದಫಲವು ಪೂರ್ಣವಾಗಿ ಯಜಮಾನನಿಗೆ ದೊರೆಯುವುದು. ಈ ವಿಷಯವನ್ನೇ ಆಚಾರ್ಯ ಮಧ್ವರು ದ್ವಾದಶಸ್ತೋತ್ರದಲ್ಲಿ "ಅಕ್ಷಯಂ ಕರ್ಮ ಯಸ್ಮಿನ್ ಪರೇಸ್ವರ್ಪಿತಂ...." ಎಂಬುದಾಗಿ ತಿಳಿಸಿದ್ದಾರೆ. ಆದ್ದರಿಂದ ಅನುಸಂಧಾನ ಪೂರ್ವಕವಾಗಿ ಸತ್ಕರ್ಮಾಚರಣೆ ಮಾಡಿದಾಗ ಫಲ ಅಧಿಕವಾಗುತ್ತದೆ.

ಈ ಪುಸ್ತಕದಲ್ಲಿ ವ್ಯಾಕರಣಾದಿ ದೋಷಗಳನ್ನು ಪರಿಶೀಲಿಸಿ ತಿದ್ದುಪಡಿಮಾಡಿ ಕೊಟ್ಟಿರುತ್ತೇವೆ. ಈ ಗ್ರಂಥವನ್ನು ಬೆಳಕಿಗೆ ತರಲು ಶ್ರಮಿಸಿದ ಸುದರ್ಶನ ಆಚಾರ್ಯ ಇವರಿಗೆ ಹಾರ್ದಿಕ ಅಭಿನಂದನೆಗಳು. ಇವರಿಗೆ ಹರಿ-ವಾಯುಗುರುಗಳ ಅನುಗ್ರಹ ಸದಾ ಇರಲಿ ಎಂದು ಪ್ರಾರ್ಥಿಸುವೆನು.

ಜಿ. ವಿ. ರಾಘವೇಂದ್ರ ಆಚಾರ್ಯ,

ಉಡುಪಿ

## ಗ್ರಂಥದಕುರಿತು...

ವಿಷ್ಣುರ್ವರಿಷ್ಠೋ ದೇವಾನಾಂ ಹ್ರದಾನಾಮುದಧಿರ್ಯಥಾ |
ನದೀನಾಂ ಚ ಯಥಾ ಗಂಗಾ ಪರ್ವತಾನಾಂ ಹಿಮಾಲಯಃ ||
ಅಶ್ವತ್ಥಃ ಸರ್ವವೃಕ್ಷಾಣಾಂ ರಾಜ್ಞಾಮಿಂದ್ರೋ ಯಥಾ ವರಃ |
ದೇವೀನಾಂ ಚ ಯಥಾ ದುರ್ಗಾ ವರ್ಣಾನಾಂ ಬ್ರಾಹ್ಮಣೋ ಯಥಾ ||
ತಥಾ ಸಮಸ್ತಶಾಸ್ತ್ರಾಣಾಂ ತಂತ್ರಶಾಸ್ತ್ರಮನುತ್ತಮಮ್ |

ದೇವತೆಗಳಲ್ಲಿ ಸರ್ವೋತ್ತಮನಾದ ಹರಿಯಂತೆ, ಜಲಾಶಯಗಳಲ್ಲಿ ಸಮುದ್ರದಂತೆ, ನದಿಗಳಲ್ಲಿ ಪವಿತ್ರವಾದ ಗಂಗೆಯಂತೆ, ಪರ್ವತಗಳಲ್ಲಿ ಎತ್ತರವಾದ ಹಿಮಾಲಯದಂತೆ, ರಾಜರುಗಳಲ್ಲಿ ಇಂದ್ರನಂತೆ, ದೇವಿಯರಲ್ಲಿ ದುರ್ಗಾರೂಪಿಣಿಯಾದ ಲಕ್ಷ್ಮಿಯಂತೆ, ವರ್ಣದಲ್ಲಿ ಬ್ರಾಹ್ಮಣರಂತೆ, ಎಲ್ಲಾಶಾಸ್ತ್ರಗಳಲ್ಲಿ ತಂತ್ರಶಾಸ್ತ್ರವು ಉತ್ತಮವಾಗಿದೆ ಎಂಬುದಾಗಿ ತಂತ್ರಶಾಸ್ತ್ರದ ಕುರಿತು ತಿಳಿದವರ ಪ್ರಶಂಸೆ. ಭಾಗವತಪುರಾಣದಲ್ಲಿ -

ನಾನಾತಂತ್ರವಿಧಾನೇನ ಕಲಾವಪಿ ತಥಾ ಶೃಣು |
ಕೃಷ್ಣವರ್ಣಂ ಕಲೌಕೃಷ್ಣಂ ಸಾಂಗೋಪಾಂಗಾಸ್ತ್ರಪಾರ್ಷದಮ್ ||
ಯಜ್ಞೈಃ ಸಂಕೀರ್ತನಪ್ರಾಯೈಃ ಯಜಂತಿ ಹಿ ಸುಮೇಧಸಃ |

ಕಲಿಯುಗದಲ್ಲಿ ವಿವಿಧತಂತ್ರಗಳ ಅನುಸರಣೆಯಿಂದ ಭಗವಂತನನ್ನು ಅವನ ಅಂಗಾऽವರಣಸಹಿತವಾಗಿ ತಿಳಿದವರು ಆರಾಧಿಸುವರು ಎಂಬಲ್ಲಿ ಕಲಿಯುಗದಲ್ಲಿ ತಂತ್ರಶಾಸ್ತ್ರದ ಪ್ರಾಶಸ್ತ್ಯವನ್ನು ಎತ್ತಿ ಹಿಡಿದಿರುವರು.

ಶ್ರೀಮದಾಚಾರ್ಯರು ವೇದ-ಭಾರತ-ಪಂಚರಾತ್ರ-ಮೂಲರಾಮಾಯಣ-ಪುರಾಣಗಳು ಎಂಬ ಶಾಸ್ತ್ರ ಪ್ರಪಂಚವನ್ನು ತದನುಸಾರವಾದ ಸ್ಮೃತಿಗಳನ್ನು ಕಡೆದು ಸಾರಭೂತವಾದ ತತ್ತ್ವವಾದವೆಂಬ ಬೆಣ್ಣೆಯ ಸವಿಯನಿತ್ತರು. ಸಾಧಕರಿಗೆ ಅನುಕೂಲವಾಗುವಂತೆ ಶಾಸ್ತ್ರವಚಗಳಿಂದ ಕೂಡಿದ ಆಚಾರಗ್ರಂಥಗಳನ್ನು ಇತ್ತರು. ಇದರಲ್ಲಿ ತಂತ್ರಸಾರಸಂಗ್ರಹವೆಂಬುದು ತಂತ್ರಶಾಸ್ತ್ರದ ಪ್ರಪಂಚಕ್ಕೆ ಕೊಟ್ಟ ಅತ್ಯಮೂಲ್ಯ ಕೊಡುಗೆ. ಸೂತ್ರರೂಪವಾದ ಈ ಗ್ರಂಥದಲ್ಲಿ ಸಮಗ್ರ ಪಂಚರಾತ್ರ ಸಂಹಿತೆಗಳ ಸಾರವು ಅಡಕವಾಗಿದೆ.

ಗ್ರಂಥೋऽಯಂ ಪಾಠಮಾತ್ರೇಣ ಸಕಲಾಭೀಷ್ಟಸಿದ್ಧಿದಃ |
ಕಿಮು ಜ್ಞಾನಾದನುಷ್ಠಾನಾದುಭಯಸ್ಮಾತ್ ಪುನಃ ಕಿಮು ||

ಈ ಗ್ರಂಥದ ಪಠನಮಾತ್ರದಿಂದಲೇ ಎಲ್ಲಾ ಅಭೀಷ್ಟಸಿದ್ಧಿಸುವುದು ಎಂದ ಮೇಲೆ ಅರಿತು ಪಠಿಸಿದರೆ ಕೇಳಬೇಕೆ ? ಮತ್ತೆ ಆಚರಿಸಿದರೆ ! ತಿಳಿದು ಆಚರಿಸಿದರೆ ಅದರ ಮಹತ್ವವನ್ನು ಬೇರೆ ಹೇಳಬೇಕೇ !? ಎಂಬುದಾಗಿ ಈ ಗ್ರಂಥದ ಮಹತ್ವವನ್ನು ಶ್ರೀಮದಾಚಾರ್ಯರು ಸಾರಿದ್ದಾರೆ. ಪಂಚರಾತ್ರಸಂಹಿತೆಗಳ ಪರಿಮಾಣವು ಅಪರಿಮಿತವಾಗಿದೆ. ಈ ಪಂಚರಾತ್ರ ಜ್ಞಾನವನ್ನು ಶ್ರೀ - ಬ್ರಹ್ಮ - ವಾಯು - ವೈನತೇಯ - ಶೇಷ - ಶಿವ - ನಾರದ - ಶಾಂಡಿಲ್ಯ ಹೀಗೆ ಅನೇಕರು ಪರಮಾತ್ಮನಿಂದ ಪಡೆದಿದ್ದಾರೆ.

ಬ್ರಹ್ಮಣೇ ಕಥಿತಾತ್ ತಂತ್ರಸಾರಾದುದ್ಧೃತ್ಯ ಸಾದರಮ್ |
ಆನಂದತೀರ್ಥಮುನಿನಾ ಕೃತೋ ಗ್ರಂಥೋऽಯಮಂಜಸಾ ||

ಪರಮಾತ್ಮನಿಂದ ಬ್ರಹ್ಮನಿಗೆ ಪ್ರೋಕ್ತವಾದ ಜ್ಞಾನದಸಾರ ಈ ತಂತ್ರಸಾರಸಂಗ್ರಹ. ಶ್ರೀಮದಾಚಾರ್ಯರು ತಮ್ಮ ಭಾಷ್ಯಗಳಲ್ಲೂ ಹಲವಾರು ಪಂಚರಾತ್ರಸಂಹಿತೆಗಳ ಉಲ್ಲೇಖಿಸಿದ್ದಾರೆ.

ಅಕ್ಷಯ್ಯಸಂಖ್ಯಂ ತಂತ್ರಂ ತತ್ ಪರಸ್ಮಿನ್ ಬ್ರಹ್ಮಣಿ ಸ್ಥಿತಮ್ |
ಸಾರ್ಧಕೋಟಿಪ್ರಮಾಣೇನ ಜಗ್ರಾಹ ಭಗವಾನ್ ವಿಧಿಃ ||

ಪರಮಾತ್ಮನಿಂದ ಅತಿ ಹೆಚ್ಚು ಪಂಚರಾತ್ರಜ್ಞಾನವನ್ನು ಪಡೆದವನು ಬ್ರಹ್ಮದೇವರೆಂದು ಭಾರ್ಗವ ಸಂಹಿತೆಯೂ ತಿಳಿಸುತ್ತದೆ. ಇದರಲ್ಲಿ ಬಹುಮಟ್ಟಿನವು ಈಗ ಅನುಪಲಬ್ಧವಾದರೂ ಉಪಲಬ್ಧವಿರುವ ಸಂಹಿತೆಗಳಲ್ಲಿ ಅವುಗಳ ಉಲ್ಲೇಖವು, ಹಾಗೆಯೇ ಪ್ರತಿಪಾದಿತವಾದ ವಿಚಾರಗಳು ಕಾಣಸಿಗುವವು. ತಂತ್ರಸಾರಸಂಗ್ರಹದಲ್ಲಿ ಹೇಳಲ್ಪಟ್ಟ ಹಲವಾರು ವಿಚಾರಗಳು ಉಪಲಬ್ಧ ಪ್ರಕಾಶಸಂಹಿತೆ ಮೊದಲಾದವುಗಳಲ್ಲಿ ಕಾಣಬಹುದು. ಇಷ್ಟು ಮಹತ್ತರವಾದ ಶುದ್ಧ ತಾಂತ್ರಿಕಗ್ರಂಥವು ವೈಷ್ಣವ ತಾಂತ್ರಿಕರಿಂದಲೇ ದೂರ ಉಳಿಯಿತು. ವಿಮರ್ಶಿಸಿದರೆ ಬರುವ ಮಾತುಗಳು 'ಗ್ರಂಥವು ಬಹಳ ಸಂಕ್ಷಿಪ್ತವಾಗಿರುವಕಾರಣ ದೇವಾಲಯಗಳ ನಿರ್ಮಾಣ, ಷಡಾಧಾರಾದಿ ವಿಧಿಗಳ ವಿಸ್ತಾರವಾಗಿ ಹೇಳಿಲ್ಲವಾದ್ದರಿಂದ ಪೂರ್ಣಪ್ರಮಾಣದ ಆಚರಣೆಗೆ ಅನುಕೂಲವಿಲ್ಲ' ಎಂದು. 'ಅಲ್ಲದೆ ಕೇವಲ ವಿಷ್ಣುವಿಗೆ ಹೇಳಲಾಗಿದೆ ಇತರ

ದೇವತೆಗಳಿಗಾಗುವಾಗ ಪೀಠಾದಿಗಳ ಕಲ್ಪನೆ ಹೇಗೆ!? ಇತ್ಯಾದಿ ಹೇಳದಿರುವುದರಿಂದ ಕೈಬಿಡಲಾಗಿದೆ' ಎಂಬುದಾಗಿ ಅವರುಗಳ ಅಭಿಪ್ರಾಯ. ಶ್ರೀಮದಾಚಾರ್ಯರೇ ಹೇಳಿರುವಂತೆ,

ಅಸ್ಯ ಸಂಕ್ಷೇಪಶಾಸ್ತ್ರತ್ವಾನ್ನ ವಿಸ್ತಾರವಿರೋಧಿತಾ |

ತಂತ್ರಸಾರಸಂಗ್ರಹದಲ್ಲಿ ವಿಧಿಗಳನ್ನು ಸಂಕ್ಷಿಪ್ತವಾಗಿ ಹೇಳಿದ್ದಾರೆಂದು ವಿಸ್ತಾರವಾದ ಆಚರಣೆಗೆ ವಿರೋಧವಿಲ್ಲವೆಂಬುದನ್ನು ತಿಳಿಸಿದ್ದಾರೆ.

ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ |
ತದೇವ ವೀರ್ಯವತ್ತರಂ ಭವತಿ ||

ಯಾವುದೇ ಕರ್ಮವನ್ನು ಜಡವಾಗಿ ಆಚರಣೆಮಾಡುವುದಕ್ಕಿಂತ ತನ್ನ ಯೋಗ್ಯತೆಯ ಅನುಸಾರ ಶ್ರದ್ಧೆಯುಳ್ಳವನಾಗಿ ತಿಳಿದುಮಾಡಿದಾಗಲೇ ಅದು ಸಫಲವನ್ನು ನೀಡುವಂತದ್ದು ಎಂಬುದಾಗಿ ನಮ್ಮನ್ನು ಎಚ್ಚರಿಸಿದ್ದಾರೆ. ಆದ್ದರಿಂದ ಆಯಾಯ ದೇವತೆಗಳನ್ನು ಯಥಾರ್ಥವಾಗಿ ತಿಳಿದು ಆರಾಧಿಸುವುದರಿಂದ ಸುಸಿದ್ಧಿಯನ್ನು ಪಡೆಯಲು ಸಾಧ್ಯವಾಗುತ್ತದೆ. ಶ್ರೀಮದಾಚಾರ್ಯರು ಸರ್ವಶಾಸ್ತ್ರಗಳನ್ನು ಮಥಿಸಿ ನಾರಾಯಣನ ಪರತ್ವವನ್ನು, ಬ್ರಹ್ಮಾದಿಗಳು ನಾರಾಯಣನ ಆಶ್ರಯಿಸಿರುವ ಜೀವರು ಎಂಬ ನಿರ್ಣಯವನ್ನು ನೀಡಿರುತ್ತಾರೆ. ಶಾಂಡಿಲ್ಯಸಂಹಿತೆಯಲ್ಲಿ,

ಬ್ರಹ್ಮಾದ್ಯಾ ಭಗವದ್ಭಕ್ತಾಃ ಜೀವಾಃ ದಾಸಾಃ ನಿಸರ್ಗತಃ |
ಉಪಕುರ್ವಂತಿ ಮುಕ್ತ್ಯರ್ಥಂ ಆಶ್ರಯಾನ್ಮುರವೈರಿಣಃ ||

ಬ್ರಹ್ಮಾದಿಗಳು ಭಗವಂತನ ಭಕ್ತರು ಜೀವಮಾತ್ರರು ಪರಮಾತ್ಮನದಾಸರಾಗಿ ಸದಾ ಆಶ್ರಯಿಸಿ ಇರುವವರಾಗಿದ್ದಾರೆ ಎಂದಿದ್ದಾರೆ. ಹಾಗೆಯೇ ಭಾರದ್ವಾಜಸಂಹಿತೆಯಲ್ಲೂ,

ಅಶುದ್ಧಾ ಬ್ರಹ್ಮರುದ್ರಾದ್ಯಾ ಜೀವಾ ವಿಷ್ಣೋರ್ವಿಭೂತಯಃ |

ಜೀವಮಾತ್ರರಾದ ಬ್ರಹ್ಮರುದ್ರಾದಿಗಳು ವಿಷ್ಣುವಿನ ಪ್ರತಿಮಾಸ್ಥಾನೀಯರು ಅರ್ಥಾತ್ ಅವರ ಅಂತರ್ಯಾಮಿಯಾಗಿ ನಿಯಮಿಸುವವನು ನಾರಾಯಣನೇ ಆಗಿದ್ದಾನೆ ಎಂದಿದ್ದಾರೆ. ಲಿಂಗಪುರಾಣದಲ್ಲೂ,

ಯ ಏಕಃ ಪುರುಷಃ ಶ್ರೇಷ್ಠೋ ಪರಮಾತ್ಮಾ ಜನಾರ್ದನ |

ಯಸ್ಮಾತ್ ಬ್ರಹ್ಮಾ ತತಃ ಸರ್ವಂ ಸಮಾಶ್ರಿತ್ಯೈವಮುಚ್ಯತೇ ||

ಅವನೊಬ್ಬನೇ ಪುರುಷನು ಶ್ರೇಷ್ಠನು ಪರಮಾತ್ಮನಾದ ಜನಾರ್ದನನು, ಬ್ರಹ್ಮನೇ ಮೊದಲಾದವರು ಅವನನ್ನು ಆಶ್ರಯಿಸಿ ಮುಕ್ತರಾಗುವರು ಎಂದಿದ್ದಾರೆ. ಹೀಗೆ ಪರಮಾತ್ಮನ ಆಶ್ರಯಿಸಿರುವವರೂ, ಜೀವಮಾತ್ರರೂ ಆದ ಬ್ರಹ್ಮಾದಿಗಳನ್ನು ಪರತ್ವದಿಂದಲೂ, ಸ್ವತಂತ್ರರಾಗಿಯೂ ಆರಾಧಿಸುವುದು ಸಾತ್ವಿಕಾರಾಧನೆ ಎನಿಸಲಾರದು ಎಂಬುದನ್ನು ಶ್ರೀಮದಾಚಾರ್ಯರು ತಂತ್ರಸಾರಸಂಗ್ರಹದಲ್ಲಿ ತಿಳಿ ಹೇಳಿದ್ದಾರೆ.

ದುರ್ಗಾಶಿವಸ್ಕಂದಸೂರ್ಯವಿನಾಯಕಮುಖಾನಪಿ |
ಸ್ಥಾಪಯೇದುಕ್ತಮಾರ್ಗೇಣ ತತ್ತನ್ಮಂತ್ರೈಃ ಸ್ಮರನ್ ಹರಿಮ್ ||

ದುರ್ಗಾ-ಶಿವ-ಸ್ಕಂದ-ಸೂರ್ಯ-ವಿನಾಯಕ ಮೊದಲಾದ ದೇವತೆಗಳನ್ನು ಹೇಳಲ್ಪಟ್ಟ ವಿಧಾನದಂತೆ ಆಯಾಯ ದೇವತಾಮಂತ್ರಗಳಿಂದ ಆಯಾ ದೇವತೆಗಳಲ್ಲಿ ಅಂತರ್ಯಾಮಿಯಾದ ಹರಿಯನ್ನು ಸ್ಮರಿಸುತ್ತಾ ಆರಾಧಿಸಬೇಕು.

ಗೋಳಕಾದ್ವಿತಯಂ ವಿಷ್ಣೋಸ್ತ್ರಿತಯಂ ವಾ ಪ್ರಕೀರ್ತಿತಮ್ |
ಅನ್ಯದೇವಪ್ರತಿಷ್ಠಾಸು ತದಂತಶ್ಚಿಂತಯೇದ್ಧರಿಮ್ ||

ಶ್ರೀಬ್ರಹ್ಮಪ್ರಾಣರುಗಳಲ್ಲಿ ಪರಮಾತ್ಮನು ದ್ವಿತೀಯಗೋಳಕನೆಂದು, ರುದ್ರಾದಿಗಳಲ್ಲಿ ತೃತೀಯ ಗೋಳಕವಾಗಿ ಸ್ಮರಿಸಲ್ಪಡುವನು. ರುದ್ರಾದಿಗಳಲ್ಲಿ ದ್ವಿತೀಯಗೋಳಕನು ಪ್ರಾಣನಾಗಿದ್ದಾನೆ. 'ಆತ್ಮಾ ದೇವಾನಾಂ ಭುವನಸ್ಯ...' ಎಂಬ ವಾಯುಸೂಕ್ತದ ವಚನದಂತೆ ಪ್ರಾಣನು ದೇವತೆಗಳಲ್ಲಿ ಆತ್ಮನಾಗಿದ್ದಾನೆ. ಅಂತಹ ಪ್ರಾಣನಲ್ಲಿ ಅಂತರ್ಯಾಮಿಯಾಗಿ ಪರಮಾತ್ಮನಿದ್ದಾನೆ. ಹೀಗೆ ಗೋಳಕದ್ವಿತೀಯನಾದ ಅಥವಾ ಗೋಳಕತೃತೀಯನಾದ ಪರಮಾತ್ಮನನ್ನು ಅನ್ಯದೇವತಾ ಪ್ರತಿಷ್ಠೆಯಲ್ಲಿ ಸ್ಮರಿಸಬೇಕು.

ವಿಷ್ಣುಸ್ಮೃತಿವಿಹೀನಾ ತು ಪೂಜಾ ಸ್ಯಾದಾಸುರೀ ತಥಾ |
ಗೃಹ್ಣಂತಿ ದೇವತಾ ನೈತಾಂ ತತಃ ಸ್ಯಾದ್ ದೇಶವಿಪ್ಲವಃ ||
ವ್ಯಾಧಿಚೋರಾದಿಭಿಸ್ತಸ್ಮಾದಂತರ್ಧ್ಯೇಯೋ ಹರಿಃ ಸದಾ |

ವಿಷ್ಣುವಿನ ಸಾನಿಧ್ಯವನ್ನು ಸ್ಮರಿಸದೆ ಪೂಜಿಸಿದರೆ ಅದನ್ನು ದೇವತೆಗಳು ಸ್ವೀಕರಿಸಲಾರರು, ಅಂತಹ ಪೂಜೆಯು ಅಸುರೀ ಎಂದೆನಿಸುಕೊಳ್ಳುವುದು. ಇದರಫಲವಾಗಿ ವ್ಯಾಧಿ, ಕಳ್ಳರಕಾಟಾದಿ ಭಯಗಳು ಹೆಚ್ಚಿ ದೇಶವು ತಲ್ಲಣಗೊಳ್ಳುವುದು. ಆದ್ದರಿಂದ ಅನ್ಯದೇವಾತಾರಾಧನೆಯಲ್ಲಿ ಅಂತರ್ಯಾಮಿಯಾಗಿ ಸರ್ವನಿಯಾಮಕನಾದ ಪರಮಾತ್ಮನ ಸ್ಮರಣೆಯ ಮರೆಯಕೂಡದು ಎಂಬುದಾಗಿ ಗುರುಗಳ ಉಪದೇಶ. ಸ್ಕಂದಪುರಾಣದ ಅಭಿಪ್ರಾಯ ಹೀಗಿದೆ -

ಏಕ ಏವ ಯದಾ ವಿಷ್ಣುರ್ಬಹುಧಾ ಸ್ವಸ್ಯ ಮಾಯಯಾ |
ತಮೃತೇ ಪರಮಾತ್ಮಾನಂ ಸುಖಹೇತುರ್ನ ವಿದ್ಯತೇ ||
ಯೇऽಪ್ಯನ್ಯೇ ಶಿವದುರ್ಗಾದ್ಯಾಸ್ತೇಸ್ತೈಃ ಕರ್ಮಭಿರಾವೃತಾಃ |
ಯಚ್ಛನ್ತಿ ಪೂಜಿತಾಃ ಕಾಮಂ ತೇऽಪಿ ವಿಷ್ಣುಪರಾಯಣಾಃ ||
ಅನ್ತರ್ಯಾಮೀ ಸ ಭಗವಾನ್ದೇವಾನಾಮಪಿ ಹೃತ್ಸ್ಥಿತಃ |
ಯಾವತ್ಫಲಂ ಪ್ರೇರಯತಿ ತಾವದೇವ ದದತ್ಯಮೀ ||

ಒಬ್ಬನೇ ವಿಷ್ಣುವೇ ತನ್ನ ಇಚ್ಛೆಯಿಂದ ಅನೇಕ ರೂಪ ಉಳ್ಳವನಾಗಿರುವನು. ಅವನನ್ನು ಬಿಟ್ಟರೆ ಸುಖಕ್ಕೆ ಕಾರಣನಾದವನು ಮತ್ತೊಬ್ಬನು ಇಲ್ಲ. ಇತರ ಶಿವದುರ್ಗಾದಿ ದೇವತೆಗಳು ಆಯಾ ಕರ್ಮಗಳಿಂದ ಆವೃತರಾಗಿ, ತಮ್ಮನ್ನು ಪೂಜಿಸಿದ ಭಕ್ತರಿಗೆ ಇಷ್ಟಾರ್ಥಗಳನ್ನು ದೊರಕಿಸುತ್ತಾರೆಯಲ್ಲದೆ ಅವರೂ ವಿಷ್ಣು ಪರಾಯಣರಾದವರೇ ಅಂದರೆ ವಿಷ್ಣುಭಕ್ತರೇ ಆಗಿದ್ದಾರೆ. ಭಗವಂತನು ದೇವತೆಗಳ ಹೃದಯದಲ್ಲಿ ಅಂತರ್ಯಾಮಿಯಾಗಿ ನೆಲಸಿರುತ್ತಾನೆ. ಅವನು ಅಲ್ಲಿ ನಿಂತು ಎಷ್ಟು ಪ್ರೇರಿಸುವನೋ ಅಷ್ಟೇ ಫಲವನ್ನು ಆ ದೇವತೆಗಳೂ ಕೊಡುತ್ತಾರೆ ಎಂಬುದಾಗಿ ಸ್ಪಷ್ಟವಾಗಿ ತಿಳಿಸಿದ್ದಾರೆ. ಹೀಗೆ ಆಯಾಯ ದೇವತೆಗಳ ಅಂತರ್ಯಾಮಿಯಾದ ಭಗವಂತನ ಸ್ಮರಣೆಯಿಂದ ನಮಗೆ ಆ ದೇವತೆಯ ಆರಾಧನೆಯ ಪೂರ್ಣಫಲ ಸಿಗಲು ಸಾಧ್ಯ. ಇನ್ನು ಯಾರಲ್ಲಿ ಪರಮಾತ್ಮನ ಯಾವ ರೂಪವನ್ನು ಅಂತರ್ಯಾಮಿಯಾಗಿ ಚಿಂತಿಸಬೇಕು !? ಶ್ರೀಮದಾಚಾರ್ಯರು ತಿಳಿಸಿರುವಂತೆ -

ಅಂತರ್ಯಾಮಿ ಶ್ರಿಯಶ್ಚಾಪಿ ವಿಷ್ಣುರೇವ ನ ಸಂಶಯಃ |

ವೈಷ್ಣವಿ ಎನಿಸಿದ ಶ್ರೀಯಲ್ಲಿ ಅಂತರ್ಯಾಮಿ ಎನಿಸಿದವನು ವಿಷ್ಣುವೇ ಆಗಿದ್ದಾನೆ. ಇನ್ನೂ ವಾರಾಹಿ ಎಂದೆನಿಸಿದ ಭೂದೇವಿಯಲ್ಲಿ ವರಾಹರೂಪವೂ, ಹಾಗೆಯೇ ನಾರಸಿಂಹಿಯೆನಿಸಿದ ದುರ್ಗೆಯಲ್ಲಿ ನರಸಿಂಹರೂಪವೂ ಅಂತರ್ಯಾಮಿ. ಪ್ರಕಾಶಸಂಹಿತೆ ತಿಳಿಸುವಂತೆ,

ಚತುರ್ಮುಖೋ ವಾಸುದೇವಃ ಬ್ರಹ್ಮಣೋ ಬಿಂಬರೂಪಕಃ |
ಸಂಕರ್ಷಣೋ ಸಹಸ್ರಾಸ್ಯಃ ಫಣಿರಾಟ್ ಬಿಂಬರೂಪಕಃ ||
ಪ್ರದ್ಯುಮ್ನೋ ಮಾರಬಿಂಬಾತ್ಮಾ ಹ್ಯಾತಿಸುಂದರವಿಗ್ರಹಃ |
ಬಿಂಬಾತ್ಮಾ ಕಾಮಪುತ್ರಸ್ಯಾನಿರುದ್ಧಾಸ್ಯಾನಿರುದ್ಧಕಃ ||

ಬ್ರಹ್ಮದೇವರಲ್ಲಿ ಅಂತರ್ಯಾಮಿ ವಾಸುದೇವ. ಸಾವಿರತಲೆಗಳುಳ್ಳ ಅನಂತನ ಅಥವಾ ಗರುಡನಲ್ಲಿ ಅಂತರ್ಯಾಮಿಯಾದರೂಪ ಸಂಕರ್ಷಣ, ಹಾಗೆಯೇ ಕಾಮನಲ್ಲಿ ಪ್ರದ್ಯುಮ್ನರೂಪ, ಕಾಮಪುತ್ರನಲ್ಲಿ ಅನಿರುದ್ಧ. ಮಾರನ ಇನ್ನೊಂದು ಜನ್ಮವಾದ ಮನಸ್ತತ್ವದ ಅಭಿಮಾನಿಯಾದ ಸ್ಕಂದನಿಗೂ ಪ್ರದ್ಯುಮ್ನನೇ ಅಂತರ್ಯಾಮಿ. ವಾಗೀಶ್ವರಿಯೆನಿಸಿದ ಸರಸ್ವತಿಯಲ್ಲಿ ವಾಗೀಶ್ವರನೆನಿಸಿದ ಹಯಗ್ರೀವನು ಅಂತರ್ಯಾಮಿ. ಹನುಮನಲ್ಲಿ ರಾಮಚಂದ್ರನು ಅಂತರ್ಯಾಮಿ. ಇನ್ನೂ ಶಿವನಲ್ಲಿ -

...............ನೃಸಿಂಹೋ ರುದ್ರನಾಮಕಃ |
ರೌದ್ರತ್ವಾತ್ ಸ ಶಿವಸ್ಯಾಪಿ ಸ್ರಷ್ಟಾ ಸಂಹಾರಕಾರಕಃ ||
ಅಂತರ್ಯಾಮಿ ಶಿವಸ್ಯಾಪಿ ಮಕಾರಾರ್ಥಪ್ರಕೀರ್ತಿತಃ |

ರುದ್ರನಲ್ಲಿ ಅಂತರ್ಯಾಮಿಯಾಗಿ ಇರುವವನು ನರಸಿಂಹನಾಗಿದ್ದಾನೆ. ಉಮೆಯಲ್ಲಿ ನಾರಾಯಣರೂಪವು ಅಂತರ್ಯಾಮಿ ಎನ್ನಬಹುದು. ಗಣಪತಿಯಲ್ಲಿ ವಿಶ್ವನು ಅಂತರ್ಯಾಮಿಯೆಂದು ಶ್ರೀಮದಾಚಾರ್ಯರು ತಿಳಿಸಿರುವರು. ಹೀಗೆ ಭಗವಂತನು ಇತರ ದೇವತೆಗಳಲ್ಲಿ ಅಂತರ್ಯಾಮಿಯು, ಅವನೇ ನಿಯಾಮಕನು ಎಂಬ ಚಿಂತನೆಯೊಂದಿಗೆ ಮಾಡುವ ದೇವತೋಪಾಸನೆಯು ಸಾತ್ವಿಕ ಎನಿಸುವುದು.

ವ್ರತಂ ದಾನಂ ಪ್ರತಿಷ್ಠಾ ಚ ಶ್ರಾದ್ಧಂ ಚ ದೇವಪೂಜನಮ್ |
ಶಾಲಗ್ರಾಮಶಿಲಾಯಾಶ್ಚೈವಾಧಿಷ್ಠಾನಾತ್ಪ್ರಶಸ್ತಕಮ್ ||

ವ್ರತವಾಗಲಿ, ದಾನವಾಗಲಿ, ಪ್ರತಿಷ್ಠೆಯಾಗಲಿ, ಶ್ರಾದ್ಧವಾಗಲಿ ಅಥವಾ ದೇವತಾರ್ಚನೆಯೇ ಆಗಲಿ ಶಾಲಗ್ರಾಮವಿದ್ದು ನಡೆದಾಗ ಮಾತ್ರ ಪರಿಪೂರ್ಣವೆನಿಸುವುದು ಎಂಬುದಾಗಿ ಬ್ರಹ್ಮವೈವರ್ತಪುರಾಣದಲ್ಲಿ ವೇದವ್ಯಾಸರು ನೀಡಿದ ನಿರ್ಣಯ. ಆದ್ದರಿಂದ ಇತರ ದೇವತಾರಾಧನೆಯಲ್ಲಿ ಶಾಲಗ್ರಾಮವಿರಬಾರದು ಎಂದು ನುಡಿವವರು ಶಾಸ್ತ್ರವನ್ನು ತಿಳಿಯದವರು ಎಂಬುದು ದಿಟ.

ಚತುಃಷಷ್ಟಿಪದಂ ವಾಸ್ತುಂ ಪ್ರಾಸಾದಾದಿಷು ವಿನ್ಯಸೇತ್ |
ಬ್ರಹ್ಮಾ ಚತುಷ್ಪದೇ ಹ್ಯತ್ರ ಶೇಷಾಃ ಸ್ವಸ್ವಪದೇ ಸ್ಥಿತಾಃ ||

ಅರವತ್ನಾಲಕ್ಕುಪದಗಳುಳ್ಳ ವಾಸ್ತುಮಂಡಲವು ಪ್ರಾಸಾದಾದಿಗಳಲ್ಲಿ ಪೂಜಿಸಬೇಕು ಎಂಬುದು ವಿಶ್ವಕರ್ಮಪ್ರಕಾಶವೆಂಬ ವಾಸ್ತುಶಾಸ್ತ್ರದಮಾತು. ಇದರಂತೆ ಶ್ರೀಮದಾಚಾರ್ಯರು ತಂತ್ರಸಾರ ಸಂಗ್ರಹದಲ್ಲಿ ನಿರೂಪಿಸಿರುವ ವಾಸ್ತುಪೂಜಾ ವಿಧಾನವು ಅತ್ಯಂತ ಪ್ರಶಸ್ತವಾಗಿದೆ. ಅಷ್ಟೇ ಅಲ್ಲದೆ ಹೇಳಲ್ಪಟ್ಟ ವಾಸ್ತುದೇವತೆಗಳ ವ್ಯವಸ್ಥೆಯು ಅಪೂರ್ವವಾಗಿದೆ. ವಾಸ್ತು ಶಾಸ್ತ್ರದಂತೆ ಶಂಕುಸ್ಥಾಪನೆಮಾಡಿ ಕಲ್ಪಿಸಲ್ಪಟ್ಟ ಭೂಮಿಯಲ್ಲಿ ಮಧ್ಯಭಾಗವು ಆಕಾಶತತ್ವದ ಸ್ಥಾನವು. ಈಶಾನ್ಯವು ಜಲತತ್ವ, ಆಗ್ನೇಯಭಾಗವು ಅಗ್ನಿತತ್ವ, ನೈರ್ಋತ್ಯವು ಭೂಮಿತತ್ವ, ಹಾಗೆಯೇ ವಾಯವ್ಯವು ವಾಯುತತ್ವದ ಸ್ಥಾನವಾಗಿದೆ. ಇದಕ್ಕೆ ಅನುಸಾರವಾಗಿ ಗೇಹಾದಿಗಳ ನಿರ್ಮಾಣವು ಹೇಳಲ್ಪಡುತ್ತದೆ. ಶ್ರೀಮದಾಚಾರ್ಯರು ನೀಡಿರುವ ವಾಸ್ತುದೇವತೆಗಳ ಸ್ಥಾನಗಳಿಗೂ ಆಲಯಾದಿಗಳ ವಿನ್ಯಾಸಕ್ಕೂ ಅವಿನಾಭಾವ ಸಂಬಂಧವಿದೆ.

ಬುಧಸ್ತು ಶಶಾಂಕಪುತ್ರೋ ಜೀವನಸ್ಯಾಧಿಪಃ ಸ್ಮೃತಃ |
ಶನೈಶ್ಚರಸ್ಸೂರ್ಯಪುತ್ರಃ ಪೃಥಿವ್ಯಾತ್ಮೇತಿ ವಿಶ್ರುತಃ ||

ಬುಧನು ವರುಣನಂತೆ ಜಲಾಭಿಮಾನಿದೇವತೆಯಾಗಿದ್ದಾನೆ, ಹಾಗೆಯೇ ಶನೈಶ್ಚರನು ಪೃಥಿವೀ ತತ್ವಾಭಿಮಾನಿಯಾಗಿದ್ದಾನೆ.

ಅಗ್ನಿಭೂಮಿನಭಸ್ತೋಯವಾಯವಃ ಕ್ರಮತೋ ದ್ವಿಜ |
ಭೌಮಾದೀನಾಂ ಗ್ರಹಾಣಾಂ ತು ತತ್ವಾತ್ಮಕಾನಿ ವೈ ಕ್ರಮಾತ್ ||

ಎಂಬ ಪರಾಶರೋಕ್ತಿಯಂತೆ ಕುಜನು ಅಗ್ನಿಕಾರಕನು.

ಮೀನೇ ಕೂಪಮತೀವಮುಖ್ಯಮುದಿತಂ ಸರ್ವಾರ್ಥಪುಷ್ಟಿಪ್ರದಮ್ |

ಹೀಗೆ ಶಾಸ್ತ್ರವಚನಗಳು ವರುಣನ ದಿಕ್ಕಾದ ಪಶ್ಚಿಮಕ್ಕಿಂತಲೂ ಮೀನರಾಶಿ ಅರ್ಥಾತ್ ಈಶಾನ್ಯದಲ್ಲಿ ಕೂಪಾದಿಜಲಮೂಲಗಳ ಅಸ್ತಿತ್ವಕ್ಕೆ ಅತ್ಯಂತ ಹೆಚ್ಚು ಪ್ರಾಶಸ್ತ್ಯವನ್ನು ಹೇಳುತ್ತವೆ. ಯಾಕಿರಬಹುದು !? ಎಂದು ಪ್ರಶ್ನಿಸಿದರೆ ಜಲತತ್ತ್ವಾಭಿಮಾನಿಯಾದ ಬುಧನ ಸ್ಥಾನ ತಂತ್ರಸಾರಸಂಗ್ರಹದಲ್ಲಿ ಹೇಳಿದಂತೆ ಅದು ಈಶಾನ್ಯ. ವಾಸ್ತುಪುರುಷನ ಶಿರೋಭಾಗವನ್ನು ಆಶ್ರಯಿಸಿರುವವನು. ಆದ್ದರಿಂದ ಕೂಪಾದಿಗಳಿಗೆ ಈಶಾನ್ಯದಲ್ಲಿ ಹೆಚ್ಚು ಪ್ರಾಶಸ್ತ್ಯ. ಜೊತೆಗೆ ವಸಿಷ್ಠಾದಿಗಳ ಮತದಲ್ಲಿ,

ಸ್ನಾನಸ್ಯ ಪಾಕಶಯನಾಸ್ತ್ರಭುಜೇಶ್ಚ ಧಾನ್ಯ
ಭಂಡಾರದೈವತಗೃಹಾಣಿ ಪೂರ್ವತಃ ಸ್ಯುಃ |
ತನ್ಮಧ್ಯತಸ್ತು ಮಥನಾಜ್ಯಪುರೀಷ ವಿದ್ಯಾ -
ಭ್ಯಾಸಾಖ್ಯರೋದನರತ್ಯೌಷಧ ಸರ್ವಧಾಮ ||

ಈಶಾನ್ಯವು ದೇವಗೃಹದ ಸ್ಥಾನ, ಪೂರ್ವವು ಸ್ನಾನಗೃಹ, ಅಗ್ನೇಯದಿಕ್ಕು ಅಡುಗೆಯ ಮನೆಯು, ದಕ್ಷಿಣವು ಶಯನಗೃಹವು, ನೈರ್ಋತ್ಯವು ಆಯುಧಾದಿಗಳ ಕೋಣೆಯ ಭಾಗವು, ಪಶ್ಚಿಮದಲ್ಲಿ ಭೋಜನಾಲಯವು, ವಾಯವ್ಯವು ಧಾನ್ಯಸಂಗ್ರಹಾಲಯವು ಹಾಗೆಯೇ ಉತ್ತರವು ಭಂಡಾರದಸ್ಥಾನವೆಂದು ನಿರ್ದೇಶಿಲ್ಪಟ್ಟಿದೆ. ಉತ್ತರೇಶಾನ್ಯ ಪದಗಳು ಯಜ್ಞಜಪಾದಿಗಳ ಗೃಹಗಳ ಸ್ಥಾನಗಳೆಂದು ಹೇಳಿದ್ದಾರೆ. ವರುಣ ಜಲಾಧಿದೇವತೆ ಎಂದು ಸಾಮಾನ್ಯವಾಗಿ ಹೇಳುವುದಿದ್ದರೂ ಗರುಡಪುರಾಣ ತಿಳಿಸುವಂತೆ -

ಜಿಹ್ವೇಂದ್ರಿಯಾತ್ಮಾ ವರುಣಃ ಸೂರ್ಯಸ್ಯಾನನ್ತರೋಽಭವತ್ |

ವರುಣನು ಪ್ರಧಾನವಾಗಿ ಜಿಹ್ವೇಂದ್ರಿಯಕ್ಕೆ ಅಧಿದೇವತೆ. ಆದ್ದರಿಂದ ಅವನ ದಿಕ್ಕಾದ ಪಶ್ಚಿಮದಲ್ಲಿ ಭೋಜನಾಲಯಾದಿಗಳ ಸ್ಥಾನವನ್ನು ನಿರ್ದೇಶನಮಾಡಿದ್ದಾರೆ. ಬುಧನ ಜೊತೆಗೆ ಸೂರ್ಯ ಬೃಹಸ್ಪತ್ಯಾದಿಗಳು ಈಶಾನ್ಯದಿಗ್ಭಾಗದಲ್ಲಿ ಸ್ಥಾನಪಡೆದವರು.

ದೇವಾಲಯಪಯೋವಹ್ನಿಕ್ರೀಡಾದೀನಾಂ ತಥೈವ ಚ |
ಕೋಶಶಯ್ಯಾದ್ಯುತ್ಕರಾಣಾಮೀಶಾಃ ಸೂರ್ಯಾದಯಃ ಕ್ರಮಾತ್ ||

ಎಂಬ ಪ್ರಮಾಣದಂತೆ ಸೂರ್ಯನು ದೇವಾಲಯಕಾರಕನಾಗಿದ್ದಾನೆ. ಆದ್ದರಿಂದ ಸೂರ್ಯನಸ್ಥಾನವಾದ ಈಶಾನ್ಯದಲ್ಲೇ ದೇವಗೃಹವು ಮಾನುಷಾಲಯದಲ್ಲಿ ಹೇಳಲ್ಪಡುತ್ತದೆ. ಅಲ್ಲದೆ ಈಶಾನ್ಯದಲ್ಲಿನ ಬುಧನು -

ವಿದ್ವದ್ವಿಷ್ಣುಸಭಾವಿಹಾರಗಣಕಸ್ಥಾನಾನ್ಯುದೀಚೀಂ ವಿದಃ |

ಎಂದಂತೆ ವಿಷ್ಣುದೇವತಾಸ್ಥಾನದ ಕಾರಕನೂ ಆಗಿರುವುದರಿಂದ ಮನೆಯಲ್ಲಿ ದೇವಾಲಯಕ್ಕೆ ಈಶಾನ್ಯದಲ್ಲೇ ಪ್ರಾಶಸ್ತ್ಯ ಬಂದಿದೆ. ಗುರುವಿನ ಪದದಲ್ಲಿ ಅರ್ಥಾತ್ ಉತ್ತರೇಶಾನ್ಯಭಾಗದಲ್ಲಿ ಭಂಡಾರಗೃಹ ಜಪಯಜ್ಞಾದಿಗಳಸ್ಥಾನವೆಂದು ಹೇಳಿದ್ದಿದೆ. ಕಾರಣ,

ದೇವಬ್ರಾಹ್ಮಣಭಕ್ತಿಮಧ್ವರತಪಃಶ್ರದ್ಧಾಶ್ಚ ಕೋಶಸ್ಥಲಮ್ |

ಗುರುವು ದೇವ, ಬ್ರಾಹ್ಮಣ, ಭಕ್ತಿ, ಯಜ್ಞ, ತಪಸ್ಸು, ಶ್ರದ್ಧೆ ಭಂಡಾರಸ್ಥಳ ಮೊದಲಾದವುದಕ್ಕೆ ಕಾರಕನು. ಅಂಗಾರಕನಸ್ಥಾನ ಆಗ್ನೇಯ, ಇವನು ಅಗ್ನಿಗೃಹ ಅರ್ಥಾತ್ ಪಾಕಶಾಲೆಗೆ ಕಾರಕನಾಗಿದ್ದಾನೆ. ಇದಕ್ಕೆ ಸಂಬಧಿಸಿದ ವಿಭಾಗಗಳು ಪೂರ್ವಾಗ್ನೇಯಾದಿ ದಕ್ಷಿಣಾಗ್ನೇಯಗಳ ವ್ಯಾಪ್ತಿಯಲ್ಲಿ ಹೇಳಲ್ಪಟ್ಟಿದೆ. ಶನಿಯು -

ನೀಚಶ್ರೇಣ್ಯಶುಚಿಸ್ಥಲಂ ವರುಣದಿಕ್ ಶಾಸ್ತುಶ್ಶನೇರಾಲಯೋ |

ಶನಿಯು ಅಶುಚಿಯಾದಸ್ಥಲಕ್ಕೆ ಕಾರಕ. ಹಾಗೆಯೇ ಶನಿಯು ಶಾಸ್ತಾರನ ಕಾರಕನೂ ಆಗಿದ್ದಾನೆ. ಯೋಗದೀಪಿಕಾದಲ್ಲಿ -

ಗತ್ವಾ ನೈರ್ಋತೀಮಾಶಾಂ ಗವಾದೇರಪುರೋಭುವಿ |
ವಿನ್ಯಸ್ಯ ತೃಣಮೇಕಾಂತೇ ತತ್ರ ಮೂತ್ರಂ ಪ್ರವರ್ತಯೇತ್ ||

ಮನೆಯಿಂದ ನೈರ್ಋತ್ಯಭಾಗಕ್ಕೆ ಹೋಗಿ ಅಲ್ಲಿ ಮೂತ್ರವಿಸರ್ಜನಾದಿ ಕ್ರಿಯೆಗಳನ್ನು ಹೇಳಿದ್ದಾರೆ. ಅದಲ್ಲದೆ ವಸಿಷ್ಠಮತದಲ್ಲೂ ಪುರೀಷವಿಸರ್ಜನಾಸ್ಥಾನವನ್ನು ಮನೆಯ ನೈರ್ಋತ್ಯಭಾಗದಲ್ಲೇ ನಿರ್ದೇಶಿಸಿರುವುದು ಕಾಣಬಹುದು. ಕಾರಣ ತಂತ್ರಸಾರ ಸಂಗ್ರಹೋಕ್ತ ವಾಸ್ತುಮಂಡಲದಲ್ಲೂ ಶನಿಯಸ್ಥಾನ ಇದುವೇ ಆಗಿದೆ. ಅಲ್ಲದೆ,

ನೈರ್ಋತ್ಯೇ ಚೈವ ಶಾಸ್ತಾರಂ ಗ್ರಾಮಾತ್ ದೂರತರೇ ಸ್ಥಿತಮ್ |

ಪಾದ್ಮಸಂಹಿತೆಯಲ್ಲಿ ಶಾಸ್ತಾರನ ಸ್ಥಾನವನ್ನು ಅವನಕಾರಕನಾದ ಶನಿಯದಿಕ್ಕಿನಲ್ಲೇ ನಿರ್ದೇಶಿಸಿದ್ದು ಗಮನಿಸಬಹುದು. ಉಡುಪಿಯ ಅನಂತಾಸನ ಸನ್ನಿಧಾನದಲ್ಲೂ ಶಾಸ್ತಾರನ ಸ್ಥಾನ ಇದುವೇ ಆಗಿದೆ. ಇಷ್ಟಲ್ಲದೆ ಶಸ್ತ್ರಾಸ್ತ್ರಸಂಗ್ರಹ, ಕೃಷಿ ಉಪಕರಣಾದಿ ಸಂಗ್ರಹಸ್ಥಾನವು ನೈರ್ಋತ್ಯವೆಂದೇ ಹೇಳಿದ್ದಾರೆ. ಕಾರಣ,

ದಾಸತ್ವಂ ಕೃಷಿಸಾಧನಂ ರವಿಸುತಾತ್ಕಾರಾಗೃಹಂ ಬಂಧನಮ್ |

ಅದಕ್ಕೂ ಕಾರಕನಾದವನು ಶನಿಯೇ ಆಗಿದ್ದಾನೆ. ಶುಕ್ರನು ವಾಯುಕಾರಕನೆಂದು ಹೇಳಿರುವುದು ಕಂಡಂತಿಲ್ಲ. ಆದರೆ,

ಸುಖೀಕಾಂತವಪುಃಶ್ರೇಷ್ಠಃ ಸುಲೋಚನೋ ಭೃಗುಸುತಃ |
ಕಾವ್ಯಕರ್ತಾ ಕಫಾಧಿಕ್ಯಾನಿಲಾತ್ಮಾ ವಕ್ರಮೂರ್ಧಜಃ ||

ದೇಹದಲ್ಲಿ ವಾಯುವಿನ ಕಾರಕತ್ವ ಹೇಳಿದ್ದಾರೆ. ಶುಕ್ರನ ಕಾರಕತ್ವವುಳ್ಳ ಧಾನ್ಯಸಂಗ್ರಹಾಲಯ, ರತಿಗೃಹ, ಭೋಗವಸ್ತುಗಳ ಸ್ಥಾನವನ್ನು ವಾಯವ್ಯದಲ್ಲೇ ವಾಸ್ತು ಶಾಸ್ತ್ರಗ್ರಂಥಗಳು ನಿರ್ದೇಶನ ಮಾಡಿರುವುದ ಕಾಣಬಹುದು. ಹೀಗೆ ಶ್ರೀಮದಾಚಾರ್ಯರು ತಂತ್ರಸಾರ ಸಂಗ್ರಹದಲ್ಲಿ ಸಂಗ್ರಹಿಸಿದ ಸಾತ್ವಿಕ ವಾಸ್ತುದೇವತಾ ಕ್ರಮವು ಅತ್ಯಂತ ತಾತ್ವಿಕವಾದದ್ದು ಮತ್ತು ವಾಸ್ತುಶಾಸ್ತ್ರದ ನೆಲೆಗಟ್ಟು ಎಂಬುದು ಅರಿವಾಗುವುದು. ಶ್ರೀಮದಾಚಾರ್ಯರು ಸಂಗ್ರಹಿಸಿದ ಅಪೂರ್ವವಾದ ವಾಸ್ತುದೇವತಾ ವ್ಯವಸ್ಥೆಯು ಪಂಚರಾತ್ರ ಸಂಹಿತೆಗಳಲ್ಲಿ ಹೇಳಲ್ಪಟ್ಟಿರುವುದೇ ಆಗಿದೆ. ಪ್ರಸ್ತುತ ಹೆಚ್ಚು ಪ್ರಚಲಿತ ಇರುವ ವಾಸ್ತುದೇವತಾ ವ್ಯವಸ್ಥೆಯಲ್ಲಿ ಇಂತಹ ತಾತ್ವಿಕ ಚಿಂತನೆ ಕಷ್ಟಸಾಧ್ಯ. ಈ ವಾಸ್ತುಕ್ರಮವು ದೇವಾಲಯಕ್ಕೆ ಮಾತ್ರವಲ್ಲದೆ ಮನುಷ್ಯಾಲಯಾದಿ ಸರ್ವತ್ರ ಬಳಸಬೇಕಾದದ್ದು.

ಶಿರೋಭಾಗೇ ಸ್ಥಿತೋ ವಹ್ನಿರ್ಮುಖೇ ಆಪಃ ಸ್ತನೇ ಯಮಃ |
ಆಪವತ್ಸಶ್ಚೋತ್ತರಸ್ಯಾಂ ಸವ್ಯಮಾರ್ಗಸಮಾಶ್ರಿತಃ ||
ಪರ್ಜನ್ಯಾದ್ಯಾಸ್ತಥಾ ನಾಸಾದೃಕ್ಛ್ರವೋರಃ ಸ್ಥಲಾಸಂಗಾಃ |
ಸಪ್ತಾದ್ಯಾಃ ಪಞ್ಚ ಚ ಭುಜೇ ವಿನಸ್ಯ ಪುರುಷೋತ್ತಮೇ |
ಹಸ್ತೇ ಸವಿತಾ ಸಾವಿತ್ರೀ ವಿತಥೋಽಥಗೃಹಕ್ಷತಃ ||
ಪಾರ್ಶ್ವೇ ಜಠರೇ ವಿವಸ್ವಾಂಶ್ಚ ಆಸ್ಥಿತಃ ಪರಿತಸ್ಸದಾ |

ಊರುಜಾನುಜಂಘಸ್ಫಿಚೋ ಯಮಾದ್ಯೈಃ ಪರಿವೇಷ್ಟಿತಾಃ |
ಏತೇ ದಕ್ಷಿಣಪಾರ್ಶ್ವಸ್ಥಾ ವಾಮಪಾರ್ಶ್ವೇ ತಥೈವ ಚ ||...

ವಾಸ್ತುಪುರುಷನ ಶಿರಸ್ಸಿನಲ್ಲಿ ವಹ್ನಿಯು, ಮುಖದಲ್ಲಿ ಅಪ್ ದೇವತೆಯು, ಸ್ತನದಲ್ಲಿ ಯಮನು ಇತ್ಯಾದಿಯಾಗಿ ಪ್ರಸ್ತುತ ಹೆಚ್ಚು ಪ್ರಚಲಿತದಲ್ಲಿರುವ ಕ್ರಮ. ಈ ವಹ್ನಿಯೇ ಬೇರೆಕಡೆ ಶಿಖಿಯೆಂದು ಕರೆಯಲ್ಪಟ್ಟಿದ್ದಾನೆ. ಇವನೇ ಮುಂದಕ್ಕೆ ಈಶಾನನಾಗುವನೆಂದು ಯಾಜುಷವಾಸ್ತುಪ್ರಯೋಗದಿಂದ ತಿಳಿಯುವುದು.

ಆವಾಹಯಾಮಿ ದೇವೇಶಂ ಶಂಕರಂ ಶಿಖಿರೂಪಿಣಮ್ |
ಚತುರ್ಹಸ್ತಂ ತ್ರಿಣೇತ್ರಂ ಚ ಸ್ರುಕ್ ಶೂಲಂ ದಕ್ಷಿಣೇಕರೇ ||
ಡಮರುಕಂ ಸ್ರುವಂ ವಾಮೇ ಸ್ವಾಹೋಮಾಸಹಿತಂ ವಿಭುಮ್ |

ಈಶಾನನ್ನು ಅಗ್ನಿರೂಪನಾಗಿ ಚಿಂತಿಸಿ ಕೈಯಲ್ಲಿ ಸ್ರುಚ, ಸ್ರುವ, ಡಮರುಕ ಮತ್ತು ಶೂಲಗಳನ್ನು ಕೊಟ್ಟಿದ್ದಾರಲ್ಲದೇ ಇವನನ್ನು ಸ್ವಾಹಾದೇವಿ ಮತ್ತು ಉಮೆಯರೊಡನೆ ಇರುವನಾಗಿ ಚಿಂತನೆ ಕೊಟ್ಟಿದ್ದಾರೆ. ಮೇಷಾರೂಢನಾದ ಮಹೇಶನೆಂದೂ ಹೇಳಿದ್ದಿದೆ. ಪ್ರಸ್ತುತ ಇಲ್ಲಿ ಶಿಖಿ ಎಂಬವನು ಅಗ್ನಿಯೇ ಆಗಿದ್ದಾನೆ. ಇದು ಅಗ್ನಿ ಮತ್ತು ಮಹೇಶರನ್ನು ಸಮೀಕರಿಸುವ ತಂತ್ರ. ವಸ್ತುತಃ ಈಶಾನ್ಯದ ದೇವತೆಯಾಗಿ ಪ್ರಾಚೀನಗ್ರಂಥಗಳಲ್ಲಿ ವಹ್ನಿಯನ್ನು ಹೇಳಿದ್ದಾರೆ. ಆದರೆ ಜಲತತ್ವದ ಸ್ಥಳದಲ್ಲಿ ವಹ್ನಿಯ ಅಸ್ತಿತ್ವಕ್ಕೆ ತಾತ್ವಿಕನೆಲೆ ಕಾಣದಾದ್ದರಿಂದ ವಹ್ನಿಯನ್ನು ಈಶಾನನ ಜೊತೆ ಸಮೀಕರಿಸಲಾಗಿದೆ. ಅದೇ ಆಗ್ನೇಯದಲ್ಲಿ ಬರುವ ದೇವತೆಯು ವಾಯುವಾಗಿದ್ದಾನೆ. ವಾಯುವಿಗೂ ಆ ಸ್ಥಾನದಲ್ಲಿ ಹೇಳಿದ ಪಾಕಗೃಹಾದಿಗಳಿಗೂ ಇರುವ ಸಂಬಂಧವನ್ನು ಹೇಳುವುದು ಕಷ್ಟ. ಪ್ರಸ್ತುತ ಉಪಲಬ್ಧ ವಿಷ್ಣುಸಂಹಿತೆಯಲ್ಲಿ ಅಗ್ನಿಯಸ್ಥಾನದಲ್ಲಿ ಈಶಾನನ್ನು, ವಾಯುವಿನ ಸ್ಥಾನದಲ್ಲಿ ಅಗ್ನಿಯನ್ನು ವ್ಯತ್ಯಾಸವಾಗಿ ಹೇಳಿದ್ದು ಕಾಣಬರುವುದು. ಆದರೆ ವಿಷ್ಣುಸಂಹಿತೆಯಲ್ಲಿ ಹೇಳಿದ ದೇವತೆಗಳಿಗಿಂತ ವ್ಯತ್ಯಸ್ತವಾಗಿ ವಾಸ್ತುದೇವತೆಗಳನ್ನು ತಂತ್ರ ಸಮುಚ್ಚಯಕಾರ ತಿಳಿಸುವನು. ವಿಷ್ಣುಸಂಹಿತೆಯ ಪ್ರಕಾರ ಪಶ್ಚಿಮವಾಯವ್ಯ ಪದಗಳಲ್ಲಿ ಶೋಷನ ನಂತರ ಪಾಪಯಕ್ಷ್ಮಣ ಮುಂದೆ ವಾಯವ್ಯಮೂಲೆಯಲ್ಲಿ ಬರುವವನು ರೋಗ. ವಾಯುವ್ಯದಲ್ಲಿ ವಾಯುವನ್ನು ಹೇಳುವುದಿಲ್ಲ. ತಂತ್ರಸಮುಚ್ಚಯ ಪಾಪಯಕ್ಷ್ಮಣನ ಕೈಬಿಟ್ಟು ಆ ಸ್ಥಾನದಲ್ಲಿ

ರೋಗನನ್ನು ಹೇಳಿ ವಾಯವ್ಯದಲ್ಲಿ ವಾಯುವನ್ನು ಹೇಳುತ್ತದೆ. ಉತ್ತರೇಶಾನ್ಯದ ಪದಗಳ ದೇವತೆಗಳನ್ನು ವಿಷ್ಣುಸಂಹಿತೆಯು ಅದಿತಿ, ದಿತಿ ಮತ್ತು ಕುಬೇರರೆಂದು ಹೇಳಿದರೆ ತಂತ್ರಸಮುಚ್ಚಯವು ಅರ್ಗಲಕಾ, ದಿತಿ ಮತ್ತು ಉದಿತಿಯರನ್ನು ಹೇಳಿದೆ. ನೈರ್ಋತ್ಯದಲ್ಲಿ ಹೇಳಲ್ಪಟ್ಟಿರುವ ಪಿತೃಗಳಿಗೂ ಆ ಸ್ಥಾನದಲ್ಲಿ ಹೇಳಲ್ಪಡುವ ಶಸ್ತ್ರಾಸ್ತ್ರಗೃಹಾದಿಗಳ ವ್ಯವಸ್ಥೆಗೂ ಯಾವುದೇ ತಾತ್ವಿಕಸಂಬಂಧವನ್ನು ಹೇಳಲು ಬರುವುದಿಲ್ಲ. ಅಂತೆಯೇ ವಾಯವ್ಯದ ರೋಗಾದಿಗಳಿಗೂ ಧಾನ್ಯಸಂಗ್ರಹಣ ಆಲಯಾದಿಗಳಿಗೂ ಯಾವರೀತಿಯಾದ ಸಂಬಂಧವೆಂದು ತಿಳಿಯಲಸಾಧ್ಯವಾಗಿದೆ. ಶ್ರೀಮದಾಚಾರ್ಯರು ನೀಡಿದ ವಾಸ್ತುವಿಧಾನವು ಶಾಸ್ತ್ರಗಳ ಹಿನ್ನಲೆಯಲ್ಲೇ ಅಪೂರ್ವವೂ ಅತ್ಯಂತ ತಾತ್ವಿಕ-ಸಾತ್ವಿಕ ವಿಧಾನವಾಗಿದೆ.

ತಂತ್ರಸಮುಚ್ಚಯವು ಉತ್ತಮ ತಂತ್ರಸಂಗ್ರಹಗ್ರಂಥವಾಗಿದ್ದರೂ ಆತ್ಮಶುದ್ಧಿಯಿಂದ ಜೀರ್ಣೋದ್ಧಾರದವರೆಗೆ ಹೇಳಲ್ಪಡುವ ತಾಂತ್ರಿಕಪ್ರಕ್ರಿಯೆಗಳ ಅನುಸಂಧಾನಗಳು ಮಾಧ್ವಸಿದ್ಧಾಂತಕ್ಕೆ ಅನುಸಾರಿಯಾಗಿಲ್ಲ. ಸಂಕಲ್ಪ ಮತ್ತು ಕರ್ಮಸಮರ್ಪಣೆಗಳಲ್ಲಿ ಅಂತರ್ಯಾಮಿಯ ಚಿಂತನೆ ಮಾಡಿದಾಕ್ಷಣ ತಾಂತ್ರಿಕ ಆಚರಣೆಗಳು ಪರಿಪೂರ್ಣವಾಗಿ ಸಾಧುವೆನಿಸುವುದಿಲ್ಲ. ಪೀಠಪೂಜಾದಿಗಳಲ್ಲಿ ಒಂದೊಂದು ದೇವತೆಯಲ್ಲಿ ಒಂದೊಂದು ರೀತಿಯಾದ ಬ್ರಹ್ಮಾಂಡದ ವ್ಯವಸ್ಥೆಯ ಚಿಂತನೆ ಸರಿಯಲ್ಲ. ಹಾಗೆಯೇ ನ್ಯಾಸದಲ್ಲಿ ತತ್ವಗಳ ವ್ಯವಸ್ಥೆಯು ಬೇರೆ ಬೇರೆ ಸಿದ್ಧಾಂತಗಳನ್ನು ಒಳಗೊಡಿರುವಂತದ್ದು ಅದು ಒಂದೇ ರೀತಿಯಾಗಿರಬೇಕು. ಒಂದೊಂದು ದೇವತೆಯಲ್ಲಿ ಒಂದೊಂದು ರೀತಿಯಲ್ಲಿ ವ್ಯವಸ್ಥೆಯನ್ನು ಅನುಸರಿಸುವುದು ನಿಜವಾದ ತಂತ್ರಗಳ ಸಾಂಕರ್ಯ. ಇದು ಸಾಧಕನು ಅನುಸರಿಸಬೇಕಾದ್ದಲ್ಲ. ಈ ನಿಟ್ಟಿನಲ್ಲಿ ತಂತ್ರಸಾರಸಂಗ್ರಹದಲ್ಲಿ ಶ್ರೀಮನ್ಮಧ್ವಾಚಾರ್ಯರು ಕೊಟ್ಟ ಅಪೂರ್ವತೆಯ ಒಳಗೊಂಡು, ಪಾದ್ಮ-ವಿಷ್ಣು-ನಾರಾಯಣ - ಜಯಾಖ್ಯ - ಭಾರ್ಗವ - ಸಂಕರ್ಷಣ - ಅನಿರುದ್ಧ - ಸನತ್ಕುಮಾರವೇ ಮೊದಲಾದ ಪಂಚರಾತ್ರ ಸಂಹಿತೆಗಳನ್ನೂ, ಗರುಡ - ನಾರದೀಯ - ಅಗ್ನಿ - ಭವಿಷ್ಯ - ಮತ್ಸ್ಯ ಮುಂತಾದ ಪುರಾಣಗಳನ್ನು, ಕಾಮಿಕ - ವಿಜಯ - ಸುಪ್ರಬೇಧ - ವಿಶ್ವ - ವಾತುಲ ಮೊದಲಾದ ಆಗಮಗ್ರಂಥಗಳನ್ನು ಯೋಗದೀಪಿಕಾ- ತಂತ್ರಾರ್ಣವ - ವಿಷ್ಣುತಂತ್ರ - ನಾರಾಯಣಾತ್ಮಕಮ್ - ಲಕ್ಷಣಸಂಹಿತಾ- ತಂತ್ರಸಮುಚ್ಚಯ- ಶೇಷಸಮುಚ್ಚಯ ಮುಂತಾದ ತಂತ್ರಸಂಗ್ರಹ ಗ್ರಂಥಗಳಿಂದ ವಿಷಯಗಳನ್ನು ಆರಿಸಿ ತೆಗೆದು ಪರಮಾತ್ಮನಿಂದ ಪ್ರಾರಂಭಿಸಿ ಪಾದ್ಮಸಂಹಿತೆಯಲ್ಲಿ ಮತ್ತು ಶ್ರೀಮದಾಚಾರ್ಯರು ತಂತ್ರಸಾರಸಂಗ್ರಹದಲ್ಲಿ ಉಲ್ಲೇಖಿಸಿದ ಅವನ ಪರಿವಾರದವರಿಗೂ ಮಂತ್ರ ಸಂಗ್ರಹದಿಂದ

ಪ್ರಾರಂಭಿಸಿ ಜೀರ್ಣೋದ್ಧಾರದವರೆಗಿನ ಕ್ರಿಯೆಗಳನ್ನು ಹೇಳುವಂತೆ ಗ್ರಂಥನಿರೂಪಣೆ ಮಾಡಲು ಪ್ರಯತ್ನಿಸಿರುವೆ. ತಂತ್ರಸಾರದಲ್ಲಿ ಶ್ರೀಮದಾಚಾರ್ಯರು ಹೇಳಿದ ಕಲಶಕ್ರಮದ ಜೊತೆಗೆ ೨೫ ದ್ರವ್ಯಕಲಶಕ್ರಮವನ್ನು ಕೊಟ್ಟಿರುವೆನು. ವಾಯುಪತ್ನಿ ಎನಿಸಿದ ಭಾರತಿಯ ವಿವರ ಮತ್ತು ಭೇರಿ ಮೊದಲಾದ ಮಂಗಳವಾದ್ಯಗಳಲ್ಲಿ ಅವಳ ಆರಾಧನೆ ಉಲ್ಲೇಖವಿದ್ದರೂ ವಿಸ್ತಾರವಾದ ಪ್ರತಿಷ್ಠಾದಿಗಳಿಗೆ ಪೂರಕವಾದ ತಂತ್ರವಿಷಯವು ಉಪಲಬ್ಧ ಆಗಿಲ್ಲವಾದ್ದರಿಂದ ಇಲ್ಲಿ ನಿರೂಪಿಸಿಲ್ಲ. ತಂತ್ರ-ಶೇಷ ಸಮುಚ್ಚಯಾದಿಗಳಲ್ಲಿ ಹೆಚ್ಚಿನ ಬಲಿಕ್ರಮಗಳು ಬಂದಿದ್ದರೂ ವಿಷ್ಣುಸಂಹಿತೆಯ ವಿಷ್ಣುಬಲಿಸೂತ್ರವನ್ನೇ ಇಟ್ಟುಕೊಂಡು ಗರ್ಭದ್ವಾರ-ಗೋಪುರದ ದ್ವಾರಪಾಲಕರು, ನಿರ್ಮಾಲ್ಯಧಾರಿ ಮತ್ತು ಹೊರಗಿನಾವರಣದ ಬಲಿದೇವತೆಗಳನ್ನಷ್ಟೇ ವ್ಯತ್ಯಾಸ ಮಾಡಿದ್ದಾರೆ. ತಾರತಮ್ಯಕ್ಕನುಸಾರವಾದ ಹನ್ನೊಂದು ದೇವತೆಗಳ ಬಲಿಕ್ರಮಗಳು ದೊರಕಿದ್ದರಿಂದ ಅವುಗಳನ್ನು ಮಾತ್ರ ಕೊಡಲಾಗಿದೆ.

ಇನ್ದ್ರಿಯೇಭ್ಯಃ ಪರಾ ಹ್ಯರ್ಥಾ ಅರ್ಥೇಭ್ಯಶ್ಚ ಪರಂ ಮನಃ |
ಮನಸಸ್ತು ಪರಾ ಬುದ್ಧಿರ್ಬುದ್ಧೇರಾತ್ಮಾ ಮಹಾನ್ಪರಃ ||
ಮಹತಃ ಪರಮವ್ಯಕ್ತಮವ್ಯಕ್ತಾತ್ಪುರುಷಃ ಪರಃ |
ಪುರುಷಾನ್ನ ಪರಂ ಕಿಂಚಿತ್ಸಾ ಕಾಷ್ಠಾ ಸಾ ಪರಾ ಗತಿಃ ||

ಎಂದು ಕಠೋಪನಿಷತ್ತಿನಲ್ಲಿ ತಿಳಿಸಿದ ತತ್ವದೇವತೆಗಳ ನಡುವಿನ ತಾರತಮ್ಯವನ್ನು ಸ್ಕಂದಪುರಾಣದಲ್ಲಿ –

ತತ್ತ್ವಾಭಿಮಾನಿನೋ ದೇವಾಸ್ತೇಭ್ಯೋ ವಿದ್ಯಾಚ್ಛತಾಧಿಕಾನ್ |
ತತ್ತ್ವಾಭಿಮಾನಿದೇವೇಭ್ಯಃ ಸಪ್ತೈವ ಋಷಯೋ ವರಾಃ ||
ಸಪ್ತರ್ಷಿಭ್ಯೋ ವರೋ ಹ್ಯಗ್ನಿರಗ್ನೇಃ ಸೂರ್ಯೋದಯಸ್ತಥಾ |
ಸೂರ್ಯಾದ್ಗುರುರ್ಗುರೋಃ ಪ್ರಾಣಃ ಪ್ರಾಣಾದಿಂದ್ರೋ ಮಹಾಬಲಃ ||
ಇನ್ದ್ರಾಚ್ಚ ಗಿರಿಜಾ ದೇವೀ ದೇವ್ಯಾಃ ಶಂಭುರ್ಜಗದ್ಗುರುಃ |
ಶಂಭೋರ್ಬುದ್ಧಿರ್ಮಹಾದೇವೀ ಬುದ್ಧೇಃ ಪ್ರಾಣೋ ಬಲಾಧಿಕಃ ||
ನ ಪ್ರಾಣಾತ್ಪರಮಂ ಕಿಂಚಿತ್ಪ್ರಾಣೇ ಸರ್ವಂ ಪ್ರತಿಷ್ಠಿತಮ್ |
ಪ್ರಾಣಾಜ್ಜಾತಮಿದಂ ವಿಶ್ವಂ ಪ್ರಾಣಾತ್ಮಕಮಿದಂ ಜಗತ್ ||

ಪ್ರಾಣೇ ಪ್ರೋತಮಿದಂ ಸರ್ವಂ ಪ್ರಾಣಾದೇವ ಹಿ ಚೇಷ್ಟತೇ |
ಸರ್ವಾಧಾರಮಿಮಂ ಪ್ರಾಹುಃ ಸೂತ್ರಂ ನೀಲಾಂಬುದಪ್ರಭಮ್ ||
ಲಕ್ಷ್ಮೀಕಟಾಕ್ಷಮಾತ್ರೇಣ ಪ್ರಾಣಸ್ಯಾಸ್ಯ ಸ್ಥಿತಿರ್ಭವೇತ್ |
ಸಾ ಲಕ್ಷ್ಮೀರ್ದೇವದೇವಸ್ಯ ಕೃಪಾಲೇಶೈಕಭಾಜಿನೀ ||
ನ ವಿಷ್ಣೋಃ ಪರಮಂ ಕಿಂಚಿನ್ನ ಸಮೋ ವಾ ಕಥಂಚನ |

ತತ್ತ್ವದೇವತಾನಾಮಗಳ ಜೊತೆ ಸ್ಪಷ್ಟವಾಗಿ ತಿಳಿಸಲಾಗಿದೆ. ಹೀಗೆ ದೇವತೆಗಳ ನಡುವಿನ ತಾರತಮ್ಯವು ಶಾಸ್ತ್ರೀಯವಾಗಿರುತ್ತದೆ. ಆದ್ದರಿಂದ ಯೋಗ್ಯತೆಯಲ್ಲಿ ಹಿರಿಯ ದೇವತೆಗಳು ಅವರಿಗಿಂತ ಕಿರಿಯ ದೇವತೆಗಳಲ್ಲಿ ಪರಿವಾರದೇವತೆಗಳಾಗಿ ಪೂಜಿಸಲ್ಪಡುವುದು ಶಾಸ್ತ್ರಕ್ಕೆ ವಿರುದ್ಧವಾಗಿರುತ್ತದೆ. ಇದನ್ನೇ ಬ್ರಹ್ಮಪುರಾಣವು –

ಸಮಾನಾಂ ವಿಷಮಾ ಪೂಜಾ ವಿಷಮಾಣಾಂ ಸಮಾ ತಥಾ |
ಕ್ರಿಯತೇ ಯೇನ ದೇವೋಽಪಿ ಸ್ವಪದಾದ್ ಭ್ರಶ್ಯತೇ ಹಿ ನಃ ||

ಸಮಾನರಿಗೆ ವಿಷಮಪೂಜೆಯನ್ನು, ಸಮರಲ್ಲದವರಿಗೆ ಸಮರಂತೆ ಪೂಜೆಮಾಡಿದರೆ ಅಂಥವನು ದೇವತೆಯಾದರೂ ತನ್ನ ಪದವಿಯಿಂದ ಪತಿತನಾಗುತ್ತಾನೆ ಎಂದಿದ್ದಾರೆ. ಆದ್ದರಿಂದ ತಾರತಮ್ಯಕ್ಕೆ ಅನುಸಾರವಾದ ಆವರಣವನ್ನು ಅಥವಾ ಬಲಿಕ್ರಮವನ್ನು ಪ್ರಮುಖದೇವತೆಗಳಿಗೆ ನೀಡಲು ಪ್ರಯತ್ನಮಾಡಿದ್ದೇವೆ. ಉದಾಹರಣೆಗೆ ಗಣಪತಿಯಲ್ಲಿ ಇಂದ್ರಾದಿದೇವತೆಗಳ ಸ್ಥಾನದಲ್ಲಿ ಶೈವಾಗಮವು -

ವಿಶ್ವರೂಪಂ ವಿಶಾಲಾಕ್ಷಂ ಅಕ್ಷಯಂ ಮದವಿಭ್ರಮಮ್ |
ಉನ್ಮತ್ತಂ ಲಲಿತಂ ಭೀಮಂ ತೀಕ್ಷ್ಣದಂಷ್ಟ್ರಂ ಯಥಾಕ್ರಮಮ್ ||
ಅಸ್ಯಾಷ್ಟಮೂರ್ತೀರ್ಶಾನ್ವಷ್ಟ ಪೀಠಾನಿನ್ದ್ರಾದ್ಯಧಿಷ್ಠಿತಮ್ |

ವಿಶ್ವರೂಪಾದಿ ಅವನ ರೂಪವಿಶೇಷಗಳನ್ನು ಸ್ಥಾಪಿಸುವಂತೆ ತಿಳಿಸಿದೆ. ಹಾಗೆಯೇ ಕುಮಾರತಂತ್ರ ಸ್ಕಂದನಲ್ಲಿ -

ಗಜಾಗ್ನೀ ಚ ಯಮಶ್ಚೈವ ರಕ್ಷೋ ವರುಣವಾಯವಃ |
ಸೋಮಃ ಸುಮಿತ್ರೋ ವಸುವಾನ್ ಪರಿವಾರಾಃ ಪ್ರಕೀರ್ತಿತಾಃ ||

ಗಜ, ಅಗ್ನಿ, ಯಮ, ನಿರ್ಋತಿ, ವರುಣ, ವಾಯು, ಸೋಮ ಮತ್ತು ನಿರ್ಮಾಲ್ಯಧಾರಿಯಾದ ಸುಮಿತ್ರನನ್ನು ಕಲ್ಪಿಸಲು ತಿಳಿಸುತ್ತಾರೆ. ಹಾಗೆಯೇ ಸೂರ್ಯನಲ್ಲಿ –

ಲೋಕೇಶಸ್ಥಾನಗಾಸ್ತ್ವಷ್ಟೌ ಗ್ರಹಾಃ ಸೋಮಾದಯಃ ಕ್ರಮಾತ್ ||

ಇಂದ್ರಾದಿಗಳಸ್ಥಾನದಲ್ಲಿ ಸೋಮಾದಿಗ್ರಹರನ್ನೇ ಈಶಾನಶಿವಗುರುದೇವಪದ್ಧತಿಯಲ್ಲಿ ಹೇಳಿದ್ದಾರೆ. ಈ ಪಕ್ಷಗಳನ್ನು ಸ್ವೀಕರಿಸುವುದರಿಂದ ದೇವತಾತಾರತಮ್ಯಕ್ಕೆ ಯಾವುದೇ ಕುಂದುಂಟಾಗದು. ಹಾಗೆಯೇ ದ್ವಾರಪಾಲರ ನಂತರದ ಆವಾರಣದ ವಿಷಯದಲ್ಲಿ ಶಿವನಲ್ಲಿ-

ವೃಷೋ ವಿಘ್ನೋ ವೀರಭದ್ರೋ ಮಹಾಶಾಸ್ತಾ ಚ ಷಣ್ಮುಖಃ |
ಧನೇಶ್ವರಶ್ಚ ಚಂಡಶ್ಚ ಭಾಸ್ಕರಶ್ಚ ದಿಶಾಸ್ವಪಿ ||

ಎಂಬ ಪಕ್ಷವನ್ನು, ಲೋಕಪಾಲಕರ ವಿಷಯದಲ್ಲಿ -

ಇನ್ದ್ರಾದೀಶಾನಪರ್ಯನ್ತಂ ಬಲಿಂ ದದ್ಯಾತ್ ಸ್ವಕರ್ಮಸು ||

ಇಂದ್ರಾದಿ ಈಶಾನರವರೆಗೆ ಬಲಿ ಎಂಬ ಪಕ್ಷವನ್ನು ಸ್ವೀಕರಿಸಿದ್ದೇವೆ. ಸಪ್ತಮಾತೃಗಳು, ಜ್ಯೇಷ್ಠಾ, ಲಕ್ಷ್ಮೀ, ದುರ್ಗಾದಿಗಳ ಒಳಗೊಂಡ ಪರಿವಾರಕ್ರಮದ ಪಕ್ಷಾಂತರವನ್ನು ಮಾಹೇಶ್ವರಾದಿ ಶೈವಾಗಮಗಳು ಹೇಳಿದ್ದಿದೆ. ಅದನ್ನು ಸ್ವೀಕರಿಸದೆ ತಾರತಮ್ಯಕ್ಕೆ ಅನುಸಾರವಾದ ಪಕ್ಷವನ್ನು ಆಯ್ದು ಬಲಿಕ್ರಮವನ್ನು ಕೊಡಲಾಗಿದೆ. ಇದರಂತೆ ಇತರದೇವತೆಗಳಲ್ಲೂ ಸಿದ್ಧಾಂತಕ್ಕೆ ವಿರೋಧ ಬಾರದ ಪಕ್ಷಗಳನ್ನು ಪರಿಗ್ರಹಿಸಲಾಗಿದೆ. ಪರಮಾತ್ಮನಿಂದ ವಾಯುದೇವರವರೆಗೆ ದಿಕ್ಪಾಲಕರಲ್ಲಿ ವಾಯುವನ್ನು ಮುಖ್ಯಪ್ರಾಣನೆಂದು ತಿಳಿಯಬೇಕು. ಅನ್ಯರಲ್ಲಿ ಪ್ರವಹಾದಿ ಸಾಮಾನ್ಯವಾಯುವೆಂದು ತಿಳಿಯಬೇಕು.

ಈ ಗ್ರಂಥಕ್ಕೆ ಸಂದೇಶವಿತ್ತು ಅನುಗ್ರಹಿಸಿದ ಗುರುವರ್ಯರುಗಳಾದ ಪರ್ಯಾಯ ಕೃಷ್ಣಾಪುರ ಮಠದ ಶ್ರೀ ಶ್ರೀ ವಿದ್ಯಾಸಾಗರತೀರ್ಥಶ್ರೀಪಾದರಿಗೆ, ಕುಲಗುರುಗಳಾದ ಕಾಣಿಯೂರು ಮಠದ ಶ್ರೀ ಶ್ರೀ ವಿದ್ಯಾವಲ್ಲಭತೀರ್ಥಶ್ರೀಪಾದರಿಗೆ, ಅದಮಾರು ಕಿರಿಯ ಪೀಠಾಧೀಶರಾದ ಶ್ರೀಈಶಪ್ರಿಯತೀರ್ಥ ಶ್ರೀಪಾದರಿಗೆ, ಶ್ರೀಮಾಧವತೀರ್ಥ ಸಂಸ್ಥಾನದ ಹಿರಿಯ ಪೀಠಾಧೀಶರಾದ ಶ್ರೀವಿದ್ಯಾಸಾಗರ ಮಾಧವತೀರ್ಥರಿಗೆ, ಕಿರಿಯ ಪೀಠಾಧೀಶರಾದ ಶ್ರೀವಿದ್ಯಾವಲ್ಲಭಮಾಧವತೀರ್ಥ ಶ್ರೀಪಾದರಿಗೆ ಭಕ್ತಿಪೂರ್ವಕ ನಮನಗಳು. ಗ್ರಂಥವನ್ನು ವಿಮರ್ಶಿಸಿ ಮಾರ್ಗಸೂಚಿ ಇತ್ತ ಡಾ. ಶತಾವಧಾನಿ ಉಡುಪಿ ಶ್ರೀ ರಾಮನಾಥ

ಆಚಾರ್ಯರಿಗೂ, ಭಾಷಾಶಾಸ್ತ್ರದ ಸಲಹೆಯಿತ್ತ ವಿದ್ವಾನ್ ಶ್ರೀ ಸುದರ್ಶನ ಸಾಮಗ ಮತ್ತು ವಿದ್ವಾನ್ ಶ್ರೀ ಜಿ. ವಿ. ಆಚಾರ್ಯರಿಗೂ, ಗ್ರಂಥದ ರಚನೆಗೆ ಪ್ರೋತ್ಸಾಹವಿತ್ತ ವಿದ್ಯಾಗುರುಗಳುಗಳಾದ ಶ್ರೀ ಸುಬ್ರಹ್ಮಣ್ಯ ಭಟ್ಟರು ಬೆಳ್ಳೆ, ಶ್ರೀ ಸುಬ್ರಹ್ಮಣ್ಯ ಸರಳಾಯರು ಕನರಾಡಿ, ಹಾಗೆಯೇ ಪಡುಬೆಳ್ಳೆ ಶ್ರೀ ಸುಬ್ರಹ್ಮಣ್ಯ ಉಪಾಧ್ಯಾಯರಿಗೂ ನಾನು ಸದಾ ಚಿರಋಣಿ. ಹಾಗೆಯೇ ಆಸಕ್ತಿಯನ್ನು ಗುರುತಿಸಿ ಪ್ರೋತ್ಸಾಹ ಮತ್ತು ಸಹಕಾರಕ್ಕಾಗಿ ಆತ್ಮೀಯ ಗೆಳೆಯರಾದ ಪುತ್ತೂರು ವಿದ್ವಾನ್ ಶ್ರೀ ವಾದಿರಾಜ ತಂತ್ರಿವರ್ಯರನ್ನು, ವಿಷಯ ನಿರೂಪಣೆಯಲ್ಲಿ ಸಹಕರಿಸಿದ ಡಾ. ಶ್ರೀ ರಾಧಾಕೃಷ್ಣ ಬಿ ಯವರನ್ನು ಹಾಗೆಯೇ ಶ್ರೀ ನಂದಕಿಶೋರ ಭಟ್ಟರನ್ನು ಸದಾ ಸ್ಮರಿಸುತ್ತೇನೆ. ಪ್ರತ್ಯಕ್ಷ-ಪರೋಕ್ಷವಾಗಿ ಸಹಕರಿಸಿದ ಸರ್ವರಿಗೂ ಚಿರಋಣಿ.

ಈ ತಂತ್ರಗ್ರಂಥವನ್ನು ಜ್ಞಾನಿಗಳು ತಿದ್ದಿ ಮಾರ್ಗದರ್ಶನ ನೀಡಿದ್ದರೂ ಇನ್ನೂ ಏನಾದರು ದೋಷಗಳಿದ್ದರೆ ಅದಕ್ಕೆ ನನ್ನ ಬುದ್ಧಿಯ ಪರಿಮಿತಿಯೇ ಕಾರಣವು. ಭತ್ತರಾಶಿಯಿಂದ ಜೊಳ್ಳನ್ನು ತೆಗೆದು ಉತ್ಕೃಷ್ಟವಾದ ಭತ್ತವನ್ನು ಸ್ವೀಕರಿಸುವಂತೆ ಈ ಗ್ರಂಥದಲ್ಲಿರುವ ವಿಷಯಗಳನ್ನು ಸ್ವೀಕರಿಸಬೇಕಾಗಿ ಕೇಳಿಕೊಳ್ಳುವ,

ಸಜ್ಜನ ವಿಧೇಯ
ಬೆಳ್ಳೆ ಸುದರ್ಶನ ಆಚಾರ್ಯ

देवतामूर्ति - विष्णौ लक्ष्म्यां च लक्ष्मीनारायण, दुर्गायां - दुर्गान्तर्यामि लक्ष्मीनरसिंह, अजे - ब्रह्मान्तर्यामि मायावासुदेव, सरस्वत्यां - सरस्वत्यान्तर्यामि लक्ष्मीहयग्रीव, हनुमति - प्राणस्थ सीतारामचन्द्र, शिवे - सदाशिवान्तर्यामि प्राणस्थ लक्ष्मीनरसिंह, पार्वत्यां - पार्वत्यान्तर्यामि प्राणस्थ लक्ष्मीनारायण, शेषे - शेषान्तर्यामि प्राणस्थ जयासङ्कर्षण, गरुडे - गरुडान्तर्यामि प्राणस्थ जयासङ्कर्षण, कामे - कामान्तर्यामि प्राणस्थ कृतिप्रद्युम्न, कुमारे - स्कन्दान्तर्यामि प्राणस्थ कृतिप्रद्युम्न, सूर्ये - सूर्यान्तर्यामि प्राणस्थ सीतारामचन्द्र, गणपतौ - गणपत्यन्तर्यामि प्राणस्थ विश्वनामक, कुबेरे - कुबेरान्तर्यामि प्राणस्थ लक्ष्मीनारायण । देवता - तत्तत् स्थाप्यदेवताः ।
(ಈ ಗ್ರಂಥದಲ್ಲಿ ಸ್ಥಾಪಿಸಲ್ಪಡುವ ದೇವತೆಯನ್ನು ಗ್ರಹಿಸಬೇಕಾದಲ್ಲಿ 'ದೇವತಾ' ಎಂಬ ಪದವನ್ನು, ಅಂತರ್ಯಾಮಿಯಾದ ಭಗವಂತನ ಚಿಂತಿಸಬೇಕಾದಲ್ಲಿ 'ದೇವತಾಮೂರ್ತಿ' ಎಂದು ಬಳಸಲಾಗಿದೆ. ವಿಷ್ಣುವಿನಲ್ಲಿ 'ದೇವತಾ' ಎಂದಿದ್ದಲ್ಲಿ ಸ್ಥಾಪಿಸಲ್ಪಡುವ ಭಗವಂತನರೂಪವನ್ನು ಗ್ರಹಿಸಬೇಕು.)

# विषयानुक्रमणिका


| | | | |
|---|---|---|---|
| १. मन्त्रपटल: | 1-58 | प्रणवमन्त्रः | 38 |
| विष्णुमन्त्र सङ्ग्रह | 1 | व्याहृतिमन्त्रः | 38 |
| लक्ष्मीमन्त्र सङ्ग्रह | 5 | षडक्षरमन्त्रः | 39 |
| दुर्गामन्त्र सङ्ग्रहस | 8 | द्वादशाक्षरमन्त्रः | 39 |
| ब्रह्ममन्त्र सङ्ग्रह | 11 | सवितागायत्री | 40 |
| सरस्वतिमन्त्र सङ्ग्रह | 13 | केशवमन्त्रः | 40 |
| हनुमन्मन्त्र सङ्ग्रह | 15 | नारायणध्यानम् | 41 |
| शिवमन्त्र सङ्ग्रह | 18 | माधवमन्त्रः | 41 |
| पार्वतिमन्त्र सङ्ग्रह | 20 | गोविन्दमन्त्रः | 41 |
| शेषमन्त्र सङ्ग्रह | 22 | विष्णुध्यानम् | 41 |
| गरुडमन्त्रसङ्ग्रह | 24 | मधुसूदनमन्त्रः | 41 |
| काममन्त्र सङ्ग्रह | 26 | त्रिविक्रममन्त्रः | 42 |
| स्कन्दमन्त्र सङ्ग्रह | 28 | वामनध्यानम् | 42 |
| सूर्यमन्त्र सङ्ग्रह | 31 | श्रीधरमन्त्रः | 42 |
| गणपतिमन्त्र सङ्ग्रह | 33 | हृषीकेशमन्त्रः | 43 |
| कुबेरमन्त्र सङ्ग्रह | 35 | पद्मनाभमन्त्रः | 43 |
| विष्णोः मन्त्रप्रभेदाः | 38-57 | दामोदरमन्त्रः | 43 |

सङ्कर्षणमन्त्रः 44
वासुदेवध्यानम् 44
प्रद्युम्नमन्त्रः 44
अनिरुद्धमन्त्रः 44
पुरुषोत्तममन्त्रः 45
अधोक्षजमन्त्रः 45
नरसिंहध्यानम् 45
अच्युतमन्त्रः 45
जनार्दनमन्त्रः 46
उपेन्द्रमन्त्रः 46
श्रीहरिमन्त्रः 46
कृष्णाध्यानम् 47
वासुदेवादिमन्त्राः 47
मत्स्यमन्त्रः 48
कूर्ममन्त्रः 48
वराहमन्त्रः 49
नरसिंहमन्त्रः 49
हंसमन्त्रः 50
वामनमन्त्रः 51
परशुराममन्त्रः 51
राममन्त्रः 52
कृष्णमन्त्रः 53
हयग्रीवमन्त्रः 54
वेदव्यासमन्त्रः 54
दत्तात्रेयमन्त्रः 55
कपिलमन्त्रः 55
धन्वन्तरीमन्त्रः 56
शतकलामन्त्राः 57
लक्ष्म्यां मन्त्रप्रभेदाः 57-58
भुवनेश्वरीमन्त्रः 57
भूदेविमन्त्रः 57
सीतामन्त्रः 58
लक्ष्मणमन्त्रः 58
२. आत्मशुद्धिपटलः 59-65

| | | | |
|---|---|---|---|
| पवित्रलक्षण | 59 | नैवेद्यविसर्जनम् | 69 |
| भूतोच्चाटनम् | 59 | कर्मसमर्पणम् | 70 |
| आसनशुद्धिः | 59 | ४. कलशपूजापटलः | 73-104 |
| दिग्बन्धनम् | 60 | पूर्वाङ्गम् | 73 |
| गुरुस्मरणम् | 60 | वर्धनीकटाहपूजा | 73 |
| करशुद्धिः | 60 | पीठार्चनम् | 74 |
| नाडिशुद्धिः | 60 | कुम्भसंस्कारः | 74 |
| भूतशुद्धिः | 61 | कलशपूरणम् | 76 |
| तत्वन्यासः | 63 | केशवादिमूर्तिन्यासः | 77 |
| मातृकाप्राणायामः | 64 | आवाहनम् | 78 |
| मातृकान्यासः | 64 | प्राणप्रतिष्ठापनम् | 79 |
| ३. पूजाविधिपटलः | 66-72 | प्राणादिन्यासाः | 80 |
| पूर्वाङ्गम् | 66 | विष्णौ विशेषन्यासाः | 80 |
| शङ्खपूजा | 66 | अन्येषु न्यासाः | 88 |
| कलशपूजा | 67 | देवताराधना | 104 |
| बिम्बार्चनम् | 68 | परिकलशार्चनम् | 104 |
| नैवेद्यसमर्पणम् | 68 | ५. प्रतिष्ठाविधिपटलः | 105-245 |
| पूजाहोमः | 69 | स्थाननिर्देशः | 105 |

| | | | |
|---|---|---|---|
| यजमानलक्षणः | 105 | प्रासादशुद्धिः | 129 |
| आचार्यलक्षणः | 106 | अग्निकार्यनिरूपणम् | 131 |
| प्रतिष्ठाकालः | 106 | राक्षोघ्नहोमः | 138 |
| भूपरिग्रहः | 107 | भूवराहहोमः | 141 |
| भूकर्षणम् | 108 | वास्तुपूजा | 142 |
| षडाधारप्रतिष्ठा | 108 | वास्तुहोमः | 144 |
| इष्टकास्थापनम् | 111 | मण्डपसंस्कारः | 147 |
| गर्भन्यासः | 113 | कुम्भेशकलशपूजा | 157 |
| शिलापरिग्रहविधिः | 120 | कर्करीकलशपूजा | 157 |
| आलयपरिग्रहः | 123 | मृत्तिकाहरणम् | 158 |
| बिम्बपरिग्रहः | 123 | अङ्कुरार्पणम् | 159 |
| प्रतिष्ठासङ्कल्पः | 124 | बिम्बशुद्धिः | 163 |
| तोरणमुहूर्तः | 124 | व्याहतिहोमः | 164 |
| उग्राणमुहूर्तः | 125 | जलाधिवासः | 165 |
| नान्दीमुखम् | 125 | मृदाधिवासः | 167 |
| ऋत्विग्वरणम् | 127 | धान्याधिवासः | 167 |
| कौतुकबन्धनम् | 128 | पञ्चगव्याधिवासः | 168 |
| स्थानशुद्धिः | 128 | पञ्चामृताधिवासः | 168 |

| | | | |
|---|---|---|---|
| बिम्बशुद्धिकलशस्थापनम् | 169 | प्रतिष्ठा | 205 |
| बिम्बशुद्दिहोमः | 170 | शान्तिप्रायश्चित्तहोमः | 217 |
| बिम्बशुद्धिकलशस्नपनम् | 170 | प्रासादस्नपनम् | 218 |
| नेत्रोन्मिलनम् | 171 | तत्वहोमः | 221 |
| पुष्पाधिवासः | 172 | बलिपीठप्रतिष्ठा | 222 |
| शय्याधिवासः | 173 | ध्वजप्रतिष्ठा | 229 |
| शिरस्तत्वहोमः | 176 | रथसंस्कारविधिः | 230 |
| प्रतिष्ठाहोमाः | 177 | ब्रह्मकलशविधिः | 232 |
| मण्डलपूजा | 181 | अवभृतविधिः | 243 |
| प्रासादाधिवासः | 190 | ६. महोत्सवपटलः | 246-275 |
| प्रासादाधिवासहोमः | 190 | उत्सवस्य महत्वम् | 246 |
| अष्टबन्धशुद्धिः | 191 | कालनिर्णयः | 246 |
| प्रासादप्रतिष्ठा | 191 | उत्सवभेदाः | 246 |
| वेदपारायणम् | 191 | पूर्वक्रिया | 247 |
| ब्रह्मशिलाप्रतिष्ठा | 192 | ध्वजारोहणविधिः | 247 |
| रत्नन्यासविधिः | 192 | भेरिपूजा | 253 |
| पीठप्रतिष्ठा | 202 | वाद्याः | 256 |
| विष्णौ मण्डपार्चनविधिः | 204 | नित्यक्रियाविशेषः | 256 |

| | |
|---|---|
| बलिक्रमः | 258 |
| क्षेत्रपाले अष्टमूर्तयः | 272 |
| भूतबलिमन्त्रा | 272 |
| अष्टादशगणाः | 273 |
| शयनोत्सवः | 274 |
| प्रभोधोत्सवः | 274 |
| ७. प्रायश्चित्तपटलः | 276-284 |
| सामान्यक्रमः | 276 |
| बिम्बशुद्धिः | 276 |
| बिम्बजीर्णे पतने वा | 277 |
| अन्यप्रायश्चित्ताः | 278 |
| ८. जीर्णोद्धारपटलः | 285-291 |
| सङ्कोचविधिः | 286 |
| बिम्बत्यागविधिः | 291 |
| ९. परिशिष्ट | 292-328 |
| ब्रह्मरथोत्सवविधिः | 292 |
| सूर्यरथोत्सवविधिः | 294 |
| ध्वजप्रकरण | 302 |
| उपस्थानमन्त्राः | 308 |
| द्वारपाललक्षणः | 314 |
| ब्राह्म्यादिमन्त्राः | 318 |
| मुद्राः | 321 |
| मण्डलाः | 327 |

ॐ नमः श्रीनारसिंहाय बुद्ध्यात्माऽनन्तशक्तये ।
पूर्णषाड्गुण्यरूपाय ब्रह्मणे परमात्मने ॥
गुरवे सर्वलोकानां ब्रह्मणे सृष्टिकारिणे ।
द्विपद्माभयहस्ताय वरदाय नमो नमः ॥
नमस्ते प्राणदेवाय तत्वज्ञानप्रदायिने ।
रामप्रियाय भीमाय नमो मध्वस्वरूपिणे ॥
हृदयकमलसंस्थं शङ्करं चन्द्रचूडम् ।
त्रिशिखवरदहस्तं वैष्णवं तं नमामि ॥

# ॥ मन्त्रपटलः॥

## ॥ विष्णुमन्त्र सङ्ग्रह ॥

**मूलमन्त्रः - अन्तर्यामि ऋषिः । दैवी गायत्री छन्दः । परमात्मा देवता**
**ॐ क्रुद्धोल्काय हृदयाय नमः । महोल्काय शिरसे स्वाहा । वीरोल्काय शिखायै वषट् । द्यूल्काय कवचाय हुम् । सहस्रोल्काय अस्त्राय फट्**

**मन्त्राक्षरन्यासः - ॐ ॐ विश्वाय नमः ॐ (पादयोः) । नं तेजसाय (जान्वो) । मों प्राज्ञाय (नाभौ) । नां तुरीयाय (हृदि) । रां आत्मने (वाचि) । यं अन्तरात्मने (नासायां) । णां परमात्मने (नेत्रयोः) । ॐ यं ज्ञानात्मने नमः ॐ (शिरसि)**

**ध्यानम् - उद्यद्भास्वत्समाभासश्चिदानन्दैकदेहवान् ।**
**चक्रशङ्खगदापद्मधरो ध्येयोऽहमीश्वरः ॥**
**लक्ष्मीधराभ्यामाश्लिष्टः स्वमूर्तिगणमध्यगः ।**
**ब्रह्मवायुशिवाहीशविपैः शक्रादिकैरपि ॥**
**सेव्यमानोऽधिकं भक्त्या नित्यनिश्शेषशक्तिमान् ।**
**मूर्तयोऽष्टावपि ध्येयाश्चक्रशङ्खवराभयैः ॥**

युक्ताः प्रदीपवर्णाश्च सर्वाभरणभूषिताः ।

[उद्यन्नभोरत्नसपत्नरोचिः पद्मामहीबाहुलतोपगूढः ।

विभूतिमद्भूषणभूषणीयो नारायणोऽयं कमनीयरूपः ॥

विदोषसम्पूर्णसुखावबोधः स्वामी गदापद्मदरारिधारी ।

भक्त्या विरिञ्चादिभिरञ्चनीयो श्रीमध्वनाथः दृशमञ्चतान्नः ॥]

मन्त्रः - ॐ ॐ नमो नारायणाय ॐ

**उपचारमन्त्रः** - ॐ क्षीं क्षिः नमः नारायणाय विश्वात्मने ह्रीं स्वाहा

जितं ते पुण्डरीकाक्ष नमस्ते विश्वभावन ।

नमस्तेऽस्तु हृषीकेश महापुरुषपूर्वज ॥

ॐ ॐ परमधामावस्थितवदनुग्रहकाम्ययोध्यतावतरेहभिवत-

सिद्धिदमन्त्रशरीरों नमो नमः

**वेदोक्तमन्त्रः** - इदं विष्णुः काण्वो मेधातिथिः विष्णुर्गायत्री ।

ॐ इ॒दं विष्णु॒र्विच॑क्रमे त्रे॒धा नि द॑धे प॒दम् । सम॑ूह्ळमस्य पांसु॒रे ॥

**गायत्री** - ॐ नारायणाय विद्महे वासुदेवाय धीमहि ।

तन्नो विष्णुः प्रचोदयात् ॥

**पीठमन्त्राः :** पीठमध्ये - ॐ ॐ नमो नारायणाय ॐ परदेवतायै नमः । वामे- ॐ श्रीगुरुभ्यो नमः । दक्षिणे - ॐ सर्वदेवताभ्यो नमः । पनर्वामे - ॐ सर्वगुरुभ्यो नमः । पीठाधोभागे आग्नेय्यां - ॐ गरुडाय नमः । नैर्ऋत्ये - वेदव्यासाय । वायव्ये - दुर्गायै । ईशान्ये - ॐ सरस्वत्यै नमः । पीठोर्ध्वभागे आग्नेय्यां - ॐ धर्माय नमः । नैर्ऋत्ये - ज्ञानाय । वायव्ये - वैराग्याय । ऐशान्ये- ॐ ऐश्वर्याय नमः । पीठस्य पूर्वगात्रे - अधर्माय । दक्षिणगात्रे - अज्ञानाय । पश्चिमगात्रे - अवैराग्याय । उत्तरगात्रे - ॐ अनैश्वर्याय नमः । पीठस्य अधोभागे (आधारपीठे)-ॐ परमपुरुषाय नमः । तदुपरि (निधिकुम्भे) - आधारशक्त्यै । तदुपरि (शिलाकूर्मे) - कूर्माय । तदुपरि (योगनाले) - अनन्ताय । तदुपरि

(ब्रह्मशिलायां) - ॐ पृथिव्यै नमः । पीठमध्ये - क्षीरसागराय । श्वेतद्वीपाय । महते दिव्यरत्नमण्डपाय । पं पद्माय । कर्णिकायां पूर्वे - हं अर्कमण्डलाय । नैऋत्ये - सं सोममण्डलाय । वायव्ये - रं वह्निमण्डलाय । ईशान्ये - सं सत्वाय । आग्नेय्यां - रं रजसे । पश्चिमे - तं तमसे । पद्मे पूर्वे - अं आत्मने । दक्षिणे - उं अन्तरात्मने । पश्चिमे - मं परमात्मने । उत्तरे - ॐ श्रीं ज्ञानात्मने नमः । पूर्वाद्यष्टदलेषु क्रमेण - विमलायै । उत्कर्षिण्यै । ज्ञानायै । क्रियायै । योगायै । प्रह्व्यै । सत्यायै । ईशानायै नमः । कर्णिकायां - ॐ अनुग्रहायै नमः पद्ममध्ये - ॐ योगपीठस्वरूपाय अनन्ताय नमः

समष्टि - ॐ नमो भगवते विष्णवे सर्वभूतात्मने वासुदेवाय सर्वात्म योगपीठात्मने स्वाहा

आवरणमन्त्राः : वामे - ॐ लक्ष्म्यै नमः । दक्षे - ॐ धरायै नमः (इति प्रथमावरणम्) । परितः पूर्वादिदिक्षु क्रमेण - ॐ क्रुद्धोल्काय नमः । महोल्काय । वीरोल्काय । द्यूल्काय नमः । आग्नेयादिविदिक्षु - ॐ सहस्रोल्काय नमः (इति द्वितीयावरणम्) । तद्बहिः पूर्वादिदिक्षु - ॐ वासुदेवाय नमः । सङ्कर्षणाय । प्रद्युम्नाय । ॐ अनिरुद्धाय नमः (इति तृतीयावरणम्) तद्बहिः मेषादिराशिदिक्षु क्रमेण - ॐ केशवाय नमः । नारायाणाय । माधवाय । गोविन्दाय । विष्णवे । मधुसूदनाय । त्रिविक्रमाय । वामनाय । श्रीधराय । हृषीकेशाय । पद्मनाभाय । ॐ दामोदराय नमः (इति चतुर्थावरणम्) तद्बहिः मेषादिराशिदिक्षु क्रमेण - ॐ मत्स्याय नमः । कूर्माय । वराहाय । नारसिंहाय । वामनाय । भार्गवाय । रामचन्द्राय । कृष्णाय । बुद्धाय । कल्किने । अनन्ताय । ॐ विश्वरूपाय नमः (इति पञ्चमावरणम्) तद्बहिः पूर्वादिदिक्षु क्रमेण - ॐ अनन्ताय नमः । ब्रह्मणे । वायवे । ईशानाय । अग्रे - ॐ गरुडाय नमः । आग्नेयादिविदिक्षु - वारुण्यै । गायत्र्यै । भारत्यै । गिरिजायै । गरुडस्य वामे - ॐ सौपर्ण्यै नमः (इति षष्ठावरणम्)

पूर्वाद्यष्टदिक्षु क्रमेण - ॐ इन्द्राय सुराधिपतये शचीसहिताय वज्रहस्ताय सपरिग्रहाय लक्ष्मीनारायणपार्षदाय नमः । अग्नये तेजोधिपतये स्वाहा - सहिताय शक्तिधराय सपरिग्रहाय लक्ष्मीनारायणपार्षदाय नमः । यमाय धर्माधिपतये श्यामलासहिताय दण्डहस्ताय सपरिग्रहाय लक्ष्मीनारायण पार्षदाय नमः । निर्ऋतये रक्षोधिपतये कालिकासहिताय खड्गहस्ताय सपरिग्रहाय लक्ष्मीनारायणपार्षदाय नमः । वरुणाय जलाधिपतये गङ्गासहिताय पाशधराय सपरिग्रहाय लक्ष्मीनारायणपार्षदाय नमः । वायवे प्राणाधिपतये भारतीसहिताय गदाहस्ताय सपरिग्रहाय लक्ष्मीनारायणपार्षदाय नमः । सोमाय नक्षत्राधिपतये रोहिणीसहिताय कुमुदहस्ताय सपरिग्रहाय लक्ष्मीनारायणपार्षदाय नमः । ईशानाय विद्याधिपतये गिरिजासहिताय शूलधराय सपरिग्रहाय लक्ष्मीनारायणपार्षदाय नमः । नैर्ऋत्यपश्चिमयोर्मध्ये - अनन्ताय नागाधिपतये वारुणीसहिताय हलायुधधराय सपरिग्रहाय लक्ष्मीनारायणपार्षदाय नमः । ईशान्यपूर्वयोर्मध्ये - ब्रह्मणे लोकाधिपतये ब्रह्माणीसहिताय पद्महस्ताय सपरिग्रहाय लक्ष्मीनारायणपार्षदाय नमः (इति सप्तमावरणम्)

**अस्त्रमन्त्रः** - अहिर्बुध्न्य ऋषिः । अनुष्टुप् छन्दः । सुदर्शननृसिंहो देवता
ॐ आचक्राय हृदयाय नमः । विचक्राय शिरसे स्वाहा । सुचक्राय शिखायै वषट् । धीचक्राय कवचाय हुम् । सञ्चक्राय नेत्रत्रयाय वौषट् । ज्वालाचक्राय अस्त्राय फट्

**ध्यानम्** - शङ्खं चक्रं च चापं परशुमसिमिषुं शूलपाशाङ्कुशाब्जं
बिभ्राणं वज्रखेटे हलमुसलगदाकुन्तमत्युग्रदंष्ट्रम् ।
ज्वालाकेशं त्रिनेत्रं ज्वलदनलनिभं हारकेयूरभूषं
ध्यायेत् षट्कोणसंस्थं सकलरिपुजनप्राणसंहारचक्रम् ॥

**मन्त्रः** - ॐ सहस्रार हुं फट्

**वाहनमन्त्रः** - काश्यप ऋषिः । पङ्क्तिश्छन्दः । गरुडो देवता

